# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೯ - ಭಾಗ ೨



# ಅಸ್ಗಿಹಾಳ ಗೋವಿಂದದಾಸರ ಹಾಗೂ ಕಾರ್ಪರ ನರಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೯ – ಭಾಗ ೨

# ಅಸ್ಕಿಹಾಳ ಗೋವಿಂದದಾಸರ ಹಾಗೂ ಕಾರ್ಪರ ನರಹರಿದಾಸರ ಕೀರ್ತನೆಗಳು

*ಸಂಪಾದಕರು*

ಡಾ. ಬಸವರಾಜ ಸಬರದ

ಡಾ. ಜಯಲಕ್ಷ್ಮೀ ಮಂಗಳಮೂರ್ತಿ

ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHITYA VOLUME - 29 Part 2 :** *Asgihala Govindadasara Hagu Karpara Naraharidasara Keerthanegalu.* Edited by Dr.Basavaraj Sabarad and Dr. Jayalakshmi Mangalamurthy. Published by Sri.Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 51+೨೦೭



ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

ಮುದ್ರಕರು :

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

## ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾಧ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ–ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ–ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು–ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೃತಿಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಪೀಠಿಕೆ

ಸಮಗ್ರ ದಾಸವಾಙ್ಮಯವು ವೈವಿಧ್ಯಮಯವಾಗಿ ಬೆಳೆದು ನಿಂತಿದೆ. ಪ್ರಾರಂಭದ ಘಟ್ಟದಲ್ಲಿ ಶ್ರೀಪಾದರಾಯರಿಂದ ಹಿಡಿದು ಇಂದಿನ ಆಧುನಿಕ ಸಂದರ್ಭದ ಕಾರ್ಪರ ನರಹರಿದಾಸರವರೆಗೆ ಇದರ ಬೆಳವಣಿಗೆಯನ್ನು ಗಮನಿಸಬಹುದಾಗಿದೆ. ಹೀಗಾಗಿ ಅಧ್ಯಯನದ ದೃಷ್ಟಿಯಿಂದ ಸಮಗ್ರ ದಾಸ ವಾಙ್ಮಯುವನ್ನು ಎರಡು ರೀತಿಯು ಶಿಸ್ತನ್ನಳವಡಿಸಿಕೊಂಡು ಗಮನಿಸಬೇಕೆನಿಸುತ್ತದೆ.

ಶ್ರೀಪಾದರಾಜರಿಂದ ವಿಜಯುದಾಸರವರೆಗೆ ರಚನೆಗೊಂಡ ದಾಸ ವಾಙ್ಮಯವು ಶಿಷ್ಟ ಪರಂಪರೆಯಿಂದ ಬೆಳೆದು ಮಾಧ್ವ ಸಿದ್ಧಾಂತವನ್ನು ಅನುಸರಿಸಿ ರಚನೆಯಾಗಿದೆ. ಸಂಸ್ಕೃತ ಸಾಹಿತ್ಯದ ಶಾಸ್ತ್ರಗ್ರಂಥಗಳ ಅಧ್ಯಯನದ ಹಿನ್ನೆಲೆಯಲ್ಲಿ ಕನ್ನಡದಲ್ಲಿ ರಚನೆಗೊಂಡದ್ದಾಗಿದೆ. ಎರಡನೇ ಹಂತದಲ್ಲಿ ಬೆಳೆದು ಬಂದ ದಾಸ ವಾಙ್ಮಯವು ಜನಪದರಿಂದ ರಚನೆಯಾದುದಾಗಿದೆ. ಮಾಧ್ವಮತದ ಸಿದ್ಧಾಂತ ಹಾಗೂ ಮೊದಲನೇ ಘಟ್ಟದ ದಾಸವರೇಣ್ಯರ ಪ್ರಭಾವ ಸಹಜವಾಗಿಯೇ ಈ ಜನಪದ ಮೂಲದಿಂದ ಬಂದ ಹರಿದಾಸರ ಮೇಲೆ ಪ್ರಭಾವವನ್ನುಂಟು ಮಾಡಿದೆ. ಎರಡನೇ ಹಂತದಲ್ಲಿ ಬೆಳೆದು ನಿಂತಿರುವ ಈ ಜನಪದ ಹರಿದಾಸರು ಮೂಲ ಸಿದ್ಧಾಂತಕ್ಕನುಗುಣವಾಗಿಯೇ ಕೀರ್ತನೆಗಳನ್ನು ರಚಿಸಿದರು ಕೂಡಾ ಈ ಕೀರ್ತನೆಗಳಲ್ಲಿ ಜನಪದ ಸಂಸ್ಕೃತಿಯ

ಅನೇಕ ಸಂರಚನೆಗಳು ಕೂಡಿಕೊಂಡಿವೆ. ಹೀಗಾಗಿ ಈ ಎರಡನೇ ಹಂತದ ಹರಿದಾಸರ ಕೀರ್ತನೆಗಳನ್ನು ಜಾನಪದದ ನೆಲೆಯಿಂದ ನೋಡುವುದು ಕೂಡ ಇಂದಿನ ಅಗತ್ಯವಾಗಿದೆ.

ಈ ಸಂಪುಟದಲ್ಲಿ ಅಂತಹ ಜನಪದ ಪರಂಪರೆಯಿಂದ ಬಂದಂತಹ ನಾಲ್ಕು ಜನ ಹರಿದಾಸರ ಸಂಕೀರ್ತನೆಗಳನ್ನು ಸಂಪಾದಿಸಿಕೊಡಲಾಗಿದೆ. ೧೮-೧೯ನೇ ಶತಮಾನದಲ್ಲಿದ್ದ ಹರಿದಾಸರ ರಚನೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಅಧ್ಯಾತ್ಮವೆಂಬುದು ಕೇವಲ ಯತಿಗಳ ಹಾಗೂ ಪಂಡಿತರ ಸೊತ್ತಾಗಿರುವಂಥ ಸಂದರ್ಭದಲ್ಲಿ ಸಾಮಾನ್ಯ ಜನವರ್ಗದಿಂದ ಬಂದ ಈ ಹರಿದಾಸರು ಸಂಸಾರದಲ್ಲಿದ್ದುಕೊಂಡೇ ಮಹತ್ತರವಾದುದನ್ನು ಸಾಧಿಸಿದರು. ತಮ್ಮ ದಿನನಿತ್ಯದ ದುಡಿಮೆಯ ಪ್ರತೀಕಗಳ ಮೂಲಕವೇ ಅಧ್ಯಾತ್ಮದ ಅನನ್ಯತೆಯನ್ನು ಕಟ್ಟಿ ನಿಲ್ಲಿಸಿದರು. ಸಂಸಾರದ ಜಂಜಾಟದಲ್ಲಿದ್ದುಕೊಂಡೇ ಭಕ್ತಿಯ ಮಹತ್ವವನ್ನು ಸಾರಿ ಹೇಳಿದರು. ಹೀಗಾಗಿ ಇವರಿಗೆ ಸಂಸಾರವೆಂಬುದು ಅಧ್ಯಾತ್ಮ ಸಾಧನೆಗೆ ತೊಡಕಾಗಿ ಕಾಣಲಿಲ್ಲ. ಈ ಸಾಮಾನ್ಯ ವರ್ಗದಿಂದ ಬಂದ ಹರಿದಾಸರ ವಿಶಿಷ್ಟತೆಯೇನೆಂದರೆ ಇವರು ಕೇವಲ ಕೀರ್ತನಗೆಳನ್ನು ಮಾತ್ರ ರಚಿಸಲಿಲ್ಲ. ಕೀರ್ತನೆ, ಕಥನ ಕವನಗಳೊಂದಿಗೆ, ಲಾವಣಿ, ಗೀಗೀ ಪದ, ಬಯಲಾಟದಂತಹ ಜನಪದ ಪ್ರಕಾರಗಳಲ್ಲಿಯೂ ಕಾವ್ಯ ರಚಿಸಿದರು.

ಈ ಸಂಪುಟದಲ್ಲಿ ಬರುವ ನಾಲ್ಕು ಜನ ಹರಿದಾಸರಲ್ಲಿ ಇಬ್ಬರು ಹರಿದಾಸರು ಸುಶಿಕ್ಷಿತ ಮನೆತನದಿಂದ ಬಂದರೆ ಇನ್ನಿಬ್ಬರು ಹರಿದಾಸರು ಸಾಮಾನ್ಯ ವರ್ಗದಿಂದ ಬಂದವರಾಗಿದ್ದಾರೆ. ಇವರು ಹುಟ್ಟಿ ಬಂದ ಪರಿಸರದಲ್ಲಿ ವ್ಯತ್ಯಾಸವಿದ್ದರೂ ಹರಿದಾಸ ಮತದ ತತ್ತ್ವಗಳ ಪಾಲನೆಯಲ್ಲಿ ಒಮ್ಮತವಿರುವುದನ್ನು ಕಾಣಬಹುದಾಗಿದೆ.

ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಹದಿನೆಂಟು ಮತ್ತು ಹತ್ತೊಂಬತ್ತನೇ ಶತಮಾನವನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಿರುವುದಿಲ್ಲ. ಆದರೆ ಕುತೂಹಲದ ಸಂಗತಿಯೆಂದರೆ ಈ ಎರಡು ಶತಮಾನಗಳ ಅವಧಿಯಲ್ಲಿ

ಅಸಂಖ್ಯಾತ ತತ್ತ್ವಪದಕಾರರು, ಕೀರ್ತನಕಾರರು ಹುಟ್ಟಿಬೆಳೆದಿರುವುದು ಗಮನಾರ್ಹ ಸಂಗತಿಯೆನಿಸುತ್ತದೆ. ಹದಿನೈದು ಹದಿನಾರನೇ ಶತಮಾನದಲ್ಲಿದ್ದ ಶಿಷ್ಟ ಪರಂಪರೆ ಈ ಸಮುದಾಯದ ಮೇಲೆ ಪ್ರಭಾವ ಬೀರಿದ್ದರೂ ಸಾಮಾನ್ಯವರ್ಗದಿಂದ ಬಂದ ಈ ಹರಿದಾಸರು ರಚಿಸಿದ ರಚನೆಗಳು ಭಾಷೆ, ವಸ್ತು, ಅಭಿವ್ಯಕ್ತಿ ನೆಲೆಯಲ್ಲಿ ವಿಶಿಷ್ಟವಾಗಿಯೇ ನಿಲುತ್ತವೆ.

ಈ ಸಂಪುಟದ ೧ನೇ ಭಾಗದಲ್ಲಿ ಬೆಳಗಾಂವ ಜಿಲ್ಲೆಯ ಗೋಕಾಕದ ಅನಂತಾದ್ರೀಶರ ಕಥನ ಕವನಗಳು, ಗುಲ್ಬರ್ಗ ಜಿಲ್ಲೆಯ ಮುದನೂರಿನ ಹೆನ್ನೆರಂಗದಾಸರ ಕೀರ್ತನೆಗಳು, ಹಾಗೂ ೨ನೇ ಭಾಗದಲ್ಲಿ ರಾಯಚೂರು ಜಿಲ್ಲೆಯ ಅಸ್ಕಿಹಾಳ ಗೋವಿಂದದಾಸರ ರಚನೆಗಳು ಮತ್ತು ರಾಯಚೂರು ಜಿಲ್ಲೆಯ ಕೊಪ್ಪರ ಗ್ರಾಮದ ಕಾರ್ಪರ ನರಹರಿದಾಸರ ಕೀರ್ತನೆಗಳು ಸೇರಿಕೊಂಡಿವೆ.

## ಗೋಕಾವಿ ಅನಂತಾದ್ರೀಶರು

ಗೋಕಾವಿ ಅನಂತಾದ್ರೀಶರ ಹೆಸರು ಭೀಮಾಚಾರ್ಯರೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖವಾಗಿದೆ (ಜಯಸಿಂಹರು ರಚಿಸಿದ ಶ್ರೀವಿಷ್ಣುತೀರ್ಥರ ಕೃತಿ) ಆದರೆ ನಾವು ಕ್ಷೇತ್ರಕಾರ್ಯ ಕೈಕೊಂಡು ಅವರ ವಂಶಸ್ಥರನ್ನು ಸಂದರ್ಶಿಸಿದಾಗ ಅವರ ಹೆಸರು ಅನಂತಾಚಾರ್ಯರೆಂದು ತಿಳಿದು ಬಂದಿತು. ಗಲಗಲಿ ಪಂಢರಿನಾಥಾಚಾರ್ಯರು ರಚಿಸಿರುವ "ಮಾಧ್ವವಾಙ್ಮಯ ತಪಸ್ವಿಗಳು" ಗ್ರಂಥದಲ್ಲಿಯೂ ಕೂಡಾ ಇವರ ಹೆಸರನ್ನು ಅನಂತಾಚಾರ್ಯರೆಂದೇ ನಮೂದಿಸಲಾಗಿದೆ.

ಅನಂತಾದ್ರೀಶರ ಕಾಲದ ಬಗೆಗೆ ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯ-ಗಳನ್ನು ಗಮನಿಸಬಹುದಾಗಿದೆ. ಗಲಗಲಿ ಪಂಢರಿನಾಥಾಚಾರ್ಯರು ಇವರ ಕಾಲವನ್ನು ಕ್ರಿ.ಶ.೧೮೦೦ ರಿಂದ ೧೮೮೦ ಎಂದು ಗುರುತಿಸಿದ್ದಾರೆ. ಆದರೆ ಅನಂತಾಚಾರ್ಯರು ತಮ್ಮ ಗುರುಗಳಾದ ಶ್ರೀ ವಿಷ್ಣುತೀರ್ಥರನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಶ್ರೀ ವಿಷ್ಣುತೀರ್ಥರ ಕಾಲವು ಕ್ರಿ.ಶ ೧೭೫೬ ರಿಂದ ೧೮೦೬ರವರೆಗೆ ಇದ್ದದು ತಿಳಿದುಬರುತ್ತದೆ. ಹೀಗಿರುವಾಗ ಗಲಗಲಿಯವರು ಹೇಳುವಂತೆ ಅನಂತಾದ್ರೀಶರ ಕಾಲ ೧೮೦೦-೧೮೮೦ ಎಂಬುದು ಸೂಕ್ತ-ವಾದುದಲ್ಲ.ಅನಂತಾದ್ರೀಶರ ಕಾಲವನ್ನು ಸಧ್ಯಕ್ಕೆ ಕ್ರಿ.ಶ ೧೭೭೬-೧೮೪೦ ರವರೆಗೆ

ಎಂದಿಟ್ಟುಕೊಳ್ಳಬಹುದಾಗಿದೆ. ಸಂಗೀತ ವಿದ್ವಾಂಸರಾಗಿದ್ದ ದಾಸರು ಜನಪದ ಪಾರಿಜಾತ ಆಟದಲ್ಲಿ ನೈಪುಣ್ಯತೆ ಗಳಿಸಿದ್ದರೆಂದು ತಿಳಿದುಬರುತ್ತದೆ. ಹೀಗಾಗಿ ಇವರ ರಚನೆಗಳ ಮೇಲೆಯೂ ಜನಪದದ ಗಾಢ ಪ್ರಭಾವವನ್ನು ಕಾಣ ಬಹುದಾಗಿದೆ. ಅನಂತಾದ್ರೀಶರು ಚಿತ್ರಕಲೆಯಲ್ಲಿಯೂ ನಿಷ್ಣಾತರಾಗಿದ್ದರೆಂದು ಹೇಳಲಾಗುತ್ತದೆ. ಶ್ರೀ ಉದಯ ಕಡಕೋಳರು ದಾಸರ ವಂಶಸ್ಥರು. ಇವರು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಇವರ ಬಳಿ ದಾಸರು "ಶ್ರೀವೆಂಕಟೇಶ ಪಾರಿಜಾತ"ದ ಕಥನವನ್ನು ಚಿತ್ರಕಲೆಯಲ್ಲಿ ಬಿಡಿಸಿದ ಗ್ರಂಥವಿದೆ. ದಾಸರು ತಮ್ಮ ಜೀವಿತದ ಕೊನೆಯ ದಿನಗಳನ್ನು ಬೆಳಗಾಂವ ಜಿಲ್ಲೆಯ, ರಾಮದುರ್ಗ ತಾಲೂಕಿನ ಕಡಕೋಳು ಗ್ರಾಮದಲ್ಲಿ ಕಳೆದರೆಂದು ತಿಳಿದು ಬರುತ್ತದೆ.

ಅನಂತಾದ್ರೀಶರು ಏಳು ಸುದೀರ್ಘ ಕಥನಕಾವ್ಯಗಳನ್ನು, ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗುತ್ತದೆ. ಆದರೆ ನಮಗೆ ದೊರೆತ ಆಧಾರದ ಮೇಲೆ ಇವರು ಏಳು ಕಥನ ಕಾವ್ಯಗಳನ್ನು, ಏಳು ಕೀರ್ತನೆಗಳನ್ನು ರಚಿಸಿರುವುದು ಸ್ಪಷ್ಟವಾಗುತ್ತದೆ.

## ಹೆನ್ನೆರಂಗದಾಸರು

ಶ್ರೀ ಹೆನ್ನೆರಂಗದಾಸರ ಜನ್ಮಸ್ಥಳ ಹಾಗೂ ಅವರ ಜೀವನ ವಿವರಗಳಿಗೆ ಸಂಬಂಧಿಸಿದಂತೆ ಅಧಿಕೃತವಾದ ಮಾಹಿತಿ ದೊರಕುವುದಿಲ್ಲ. "ಹೆನ್ನೆರಂಗವಿಠಲ" ಎಂಬ ಅಂಕಿತನಾಮದಲ್ಲಿ ಅವರು ಕೀರ್ತನೆಗಳನ್ನು ರಚಿಸಿದ್ದಾರೆ. ಅಂಕಿತದಲ್ಲಿ ಹೊನ್ನರಂಗ, ಹೆನ್ನರಂಗ, ಹೊನ್ನವಿಠಲರೂಪಗಳೂ ಕಂಡುಬರುತ್ತವೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಗುತ್ತಿ ತಾಲೂಕಿನಲ್ಲಿ ಪೆನ್ನ ಅಹೋಬಲವೆಂಬ ಕ್ಷೇತ್ರವಿದೆ. ಅಲ್ಲಿಯ ನರಸಿಂಹ ದೇವರು ಸುಪ್ರಸಿದ್ಧವಾಗಿದೆ. ಈ ಕ್ಷೇತ್ರದ ಹತ್ತಿರವೇ ಪಿನಾಕಿನಿ ನದಿ ಹರಿಯುತ್ತದೆ. ಮೈಸೂರು ಪ್ರಾಂತದ ನಂದಿದುರ್ಗದಲ್ಲಿ ಹುಟ್ಟಿದ ಈ ನದಿಗೆ "ಪೆನ್ನೆರುಪೆನ್ನ" ಎಂದು ಆ ಪ್ರದೇಶದ ಜನ ಕರೆಯುತ್ತಾರೆ. ಹೀಗಾಗಿ ನರಸಿಂಹ ದೇವರ ಭಕ್ತರಾದ ಹೆನ್ನೆರಂಗದಾಸರು "ಹೆನ್ನೆರಂಗವಿಠಲ" ಎಂಬ ಮುದ್ರಿಕೆಯಿಂದ ತಮ್ಮ ಕೀರ್ತನೆಗಳನ್ನು ರಚಿಸಿದ್ದಾರೆ. ಹೀಗಾಗಿ ಇವರು ಮದ್ರಾಸ್ ಪ್ರಾಂತದ ಅನಂತಪುರ ಜಿಲ್ಲೆಯಲ್ಲಿಯೇ

ಜನಿಸಿರಬೇಕೆಂದು ಊಹಿಸಬಹುದಾಗಿದೆ. ಕನಕಗಿರಿಯ ರಾಜಗೋಪಾಲಾ-ಚಾರ್ಯರು ಕ್ರಿ.ಶ. ೧೯೩೯ರಲ್ಲಿ ಪ್ರಕಟಿಸಿರುವ ''ಹೆನ್ನೆರಂಗವಿಠಲರ ಕೀರ್ತನೆಗಳು'' ಪುಸ್ತಕದಲ್ಲಿ ಇದೇ ಅಭಿಪ್ರಾಯವನ್ನು ತಾಳಿದ್ದಾರೆ. ಮುಂದೆ ಹೆನ್ನರಂಗದಾಸರು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಮುದನೂರು ಗ್ರಾಮದಲ್ಲಿ ಬಂದು ನೆಲೆಸಿರಬಹುದಾಗಿದೆ. ಏಳು ತೀರ್ಥಗಳ ( ರಾಮತೀರ್ಥ, ಹಾಲುತೀರ್ಥ, ಸಂಗಮತೀರ್ಥ, ಪಾಂಡುತೀರ್ಥ ಮರುಳತೀರ್ಥ, ಸಕ್ಕರೆತೀರ್ಥ) ಸಂಗಮ ಕ್ಷೇತ್ರವೆಂದು ಮುದನೂರು ಗ್ರಾಮ ಪ್ರಸಿದ್ಧವಾಗಿದೆ. ಅಲ್ಲದೆ ಇಲ್ಲಿ ಏಕಶಿಲೆಯಲ್ಲಿ ಸ್ವಯಂಭೂ ರುಕ್ಮಿಣಿಪಾಂಡುರಂಗದೇವರು, ವೇಣುಗೋಪಾಲದೇವರು, ಮತ್ತು ನರಸಿಂಹದೇವರು ಆವಿರ್ಭವಿಸಿದ ತ್ರಿಮೂರ್ತಿ ಇದೆ. ಈ ಕ್ಷೇತ್ರಕ್ಕೆ ಹೆನ್ನೆರಂಗದಾಸರು ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರೆಂದು ತಿಳಿದು ಬರುತ್ತದೆ.

ಹೆನ್ನೆರಂಗದಾಸರ ಕಾಲನಿರ್ಣಯವೂ ಸಂದಿಗ್ಧವಾಗಿದೆ. ಕನಕಗಿರಿಯ ರಾಜಗೋಪಾಲಾಚಾರ್ಯರ ಪ್ರಕಾರ ಹೆನ್ನೆರಂಗವಿಠಲರು ಸುರಪುರದ ವಾಸುದೇವ ನಾಯಕರಂಥ ದೊರೆತನದಲ್ಲಿ ಬಾಳಿದರೆಂದು ತಿಳಿದು ಬರುತ್ತದೆ. ಆದ್ದರಿಂದ ಸುರಪುರದ ವಾಸುದೇವ ನಾಯಕರ ಕಾಲವನ್ನು ಗಮನದಲ್ಲಿಟ್ಟುಕೊಂಡರೆ ಹೆನ್ನೆರಂಗದಾಸರು ಕ್ರಿ.ಶ ೧೮೦೦-೧೮೬೦ರ ಸುಮಾರಿಗೆ ಬಾಳಿರಬಹುದೆಂದು ತಿಳಿದು ಬರುತ್ತದೆ.

## ಶ್ರೀ ಅಸ್ಕಿಹಾಳ ಗೋವಿಂದ ದಾಸರು

ಶ್ರೀ ಗೋವಿಂದ ದಾಸರ ಜನ್ಮಸ್ಥಳ ರಾಯಚೂರು ಜಿಲ್ಲೆಯ ಅಸ್ಕಿಹಾಳ ಗ್ರಾಮ. ಕ್ರಿ.ಶ. ೧೮೯೧ರಲ್ಲಿ ದಾಸರ ಜನನವೆಂದು ತಿಳಿದು ಬರುತ್ತದೆ. ತಂದೆ ಶ್ರೀ ಗಿರಿದಾಸರು. ಚಿಕ್ಕವಯಸ್ಸಿನಲ್ಲಿಯೇ ತಂದೆ-ತಾಯಿಯರನ್ನು ಕಳೆದುಕೊಂಡರು. ದಾಸರ ಬಾಲ್ಯವೆಲ್ಲ ಬಡತನದಲ್ಲಿಯೇ ಕಳೆಯಿತು. ದಾಸರು ತುಳಸಮ್ಮ ಎನ್ನುವವರೊಡನೆ ವಿವಾಹವಾಗಿದ್ದು, ಹುಟ್ಟಿದ ಒಂದು ಗಂಡುಮಗುವೂ ಅಸುನೀಗಿದಾಗ ದಾಸರು ಸಹಜವಾಗಿ ಅಧ್ಯಾತ್ಮದತ್ತ ಒಲಿದರು.

ಗೋವಿಂದದಾಸರದು ಅತ್ಯಂತ ಜನಪ್ರಿಯ ವ್ಯಕ್ತಿತ್ವವಾಗಿದೆ. ಜನಸಾಮಾನ್ಯ-ರೊಡನೆ ಒಂದಾಗಿ ಬಾಳಿದ ದಾಸರು, ಅಧ್ಯಾತ್ಮ ಸಾಧನೆಯ ಪಥಕ್ಕೆ ಜನಮನವನ್ನು

ಅಣಿಗೊಳಿಸಿದರು. ಜನರ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸುತ್ತ, ಸಾಮಾಜಿಕ ತಿಳಿವನ್ನು ನೀಡುತ್ತ, ಸತ್ಸಂಗ, ನಿರಂತರ ಚರ್ಚೆ, ಭಜನೆ ಮುಂತಾದ ಸಾಮೂಹಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಸಮಾಜದ ಎಲ್ಲ ವರ್ಗದವರನ್ನೂ ತೊಡಗಿಸಿದರು. ದಾಸರು ಅಸ್ಕಿಹಾಳಿನ ಗೌಡರ ಸಂಗಪ್ಪನಿಗೆ ನೀಡಿದ ರತ್ನಗರ್ಭ ಸಾಲಿಗ್ರಾಮವನ್ನು ಇಂದಿಗೂ ನೋಡಬಹುದಾಗಿದೆ. ಇವರೆಲ್ಲರೂ ಪ್ರತಿನಿತ್ಯ ಸೇರುವ ಸ್ಥಳವನ್ನು "ರಘುವೀರಮಂದಿರ"ವೆಂದು ದಾಸರು ಕರೆದಿದ್ದಾರೆ. ಸಂಪ್ರದಾಯದ, ಮಧ್ವ ಸಿದ್ಧಾಂತಗಳ ಚೌಕಟ್ಟಿನಲ್ಲಿದ್ದೇ ತಮ್ಮ ಉದಾತ್ತವಾದ ಕ್ರಾಂತಿಕಾರಕ ನಿಲುವನ್ನು ತಳೆದ ದಾಸರು ಇತರ ಮತದ ಶಿಷ್ಯರಿಗೂ ದೀಕ್ಷೆಯನ್ನು ನೀಡಿದ್ದಾರೆ. ಈ ಕಾರ್ಯಕ್ಕಾಗಿ ತಮ್ಮ ಮಠದ ಗುರುಗಳಿಂದ ಬಹಿಷ್ಕಾರವನ್ನೂ ಎದುರಿಸಿದರು. ದಾಸರ ಸಾಮಾಜಿಕ ಕಳಕಳಿಯನ್ನು ಅರಿತ ಗುರುಗಳು ತಾವೇ ಕರೆಯಿಸಿ ಸಂತೈಸಿದ ವಿಷಯ ತಿಳಿದುಬರುತ್ತದೆ. ದಾಸರು ತಮ್ಮ ಶಿಷ್ಯರೊಡನೆ ಭಜನೆ ಮಾಡುವಾಗ ಮಧ್ಯದಲ್ಲಿ ಕರ್ಪೂರದ ಆರತಿಯನ್ನು ಉರಿಸುತ್ತಿದ್ದು, ಇಂದಿಗೂ ಇವರ ಶಿಷ್ಯರು ಇದೇ ಭಜನಾಕ್ರಮವನ್ನು ಅನುಸರಿಸುತ್ತಿದ್ದಾರೆ. ಅವರ ಈ ಸಾಮಾಜಿಕ ಕಾರ್ಯಕ್ಷೇತ್ರದಂತೆ ಸಾಹಿತ್ಯಕ ಕ್ಷೇತ್ರವೂ ಹೊಸತನದಿಂದ ಕೂಡಿದುದಾಗಿದೆ. ಇಲ್ಲಿಯವರೆಗೆ ಕೀರ್ತನೆ, ಸುಳಾದಿ, ಉಗಾಭೋಗ ಮುಂತಾದ ಪ್ರಕಾರಗಳಲ್ಲಿ ಕಂಡುಬರುತ್ತಿದ್ದ ಹರಿದಾಸಸಾಹಿತ್ಯ ದಾಸರ ಉದಾತ್ತ ಮನೋಭೂಮಿಕೆಯಿಂದಾಗಿ ಲಾವಣಿ, ಗೀಗಿ, ಬಯಲಾಟದಂತಹ ಜನಪದ ಮಾಧ್ಯಮಗಳಲ್ಲೂ ಪ್ರವಹಿಸಿತು. ಗೋವಿಂದದಾಸರು ಈ ಎಲ್ಲ ಮಾಧ್ಯಮಗಳಲ್ಲೂ ಸಾಹಿತ್ಯರಚನೆಗೈದಿದ್ದಾರೆ. ಅವರು ರಚಿಸಿದ 'ಕಲಿಯುಗ ಲಾವಣಿ' ಪತನಗೊಂಡ ಸಾಮಾಜಿಕ ಮೌಲ್ಯಗಳನ್ನು ಚಿತ್ರಿಸುತ್ತದೆ. "ಕನಕಾಂಗಿ ಕಲ್ಯಾಣ" ಬಯಲಾಟವು ಇಂದಿಗೂ ಪ್ರದರ್ಶನವನ್ನು ಕಾಣುತ್ತಿದ್ದು ಮಾನವಪ್ರೇಮ, ಬಂಧುತ್ವ, ಅಂತಃಕರಣ, ಮುಂತಾದ ಮಾನವೀಯ ಮೌಲ್ಯಗಳನ್ನು ಸಾರುತ್ತದೆ. ದಾಸರು ರಚಿಸಿದ ಕೀರ್ತನೆಗಳಲ್ಲಿ ಕೇವಲ ಮೂವತ್ತು ಮಾತ್ರ ಉಪಲಬ್ಧವಾಗಿವೆ. ರಾಯಚೂರಿನಲ್ಲಿ ದಾಸರ ಸಂಬಂಧಿಗಳು ವಾಸವಾಗಿದ್ದು ಅವರ ಮನೆಯಲ್ಲಿ ದಾಸರು ಉಪಯೋಗಿಸುತ್ತಿದ್ದ ಹಾರ್ಮೋನಿಯಮ್, ತಂಬೂರಿ, ವೀಣೆ, ತಾಳ, ಚಿಟಿಕೆ

ಮುಂತಾದ ಸಂಗೀತ ಉಪಕರಣಗಳಿವೆ. ದಾಸರು ಕೇವಲ ಮೂವತ್ತನೆಯ ವರ್ಷದಲ್ಲಿಯೇ (ಕ್ರಿ.ಶ. ೧೯೧೯ ರಲ್ಲಿಯೇ) ಕಣ್ಮರೆಯಾದರು.

## ಶ್ರೀ ಕಾರ್ಪರ ನರಹರಿದಾಸರು

ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನಿಂದ ಒಂಬತ್ತು ಮೈಲಿಗಳ ಅಂತರದಲ್ಲಿ ಕೊಪ್ಪರ ಗ್ರಾಮವಿದೆ. ಇಲ್ಲಿ ಕೃಷ್ಣಾನದಿ ಹರಿಯುತ್ತಿದ್ದು ಕಾರ್ಪರ ಕ್ಷೇತ್ರವೆಂದೇ ಪ್ರಸಿದ್ಧಿ ಪಡೆದಿದೆ. ಹಿಂದೆ "ಕಾರ್ಪರ" ಹೆಸರಿನ ಋಷಿಯು ಈ ಸ್ಥಳದಲ್ಲಿ ತಪಗೈದುದರಿಂದ ಕಾರ್ಪರ ಕ್ಷೇತ್ರವೆಂದು ಹೆಸರಾಗಿದೆ. ಕೃಷ್ಣಾನದಿಯ ದಡದಲ್ಲಿ ಅಶ್ವತ್ಥವೃಕ್ಷವಿದ್ದು, ಈ ವೃಕ್ಷದಲ್ಲಿ ಶ್ರೀ ಲಕ್ಷ್ಮೀನರಸಿಂಹದೇವರ ಷೋಡಶಬಾಹು ಸಾಲಿಗ್ರಾಮ ಉದ್ಭವವಾಗಿದೆ.

ಈ ಕ್ಷೇತ್ರವು ಹರಿದಾಸ ಸಾಹಿತ್ಯದ ಇತಿಹಾಸದಲ್ಲಿಯೂ ತನ್ನ ವೈಶಿಷ್ಟ್ಯತೆಯನ್ನು ಮೆರೆದಿದೆ. ದಾಸಕೂಟದ ಪ್ರಥಮ ಹಂತದ ಸಂಘಟಕರಲ್ಲೊಬ್ಬರಾದ ಶ್ರೀ ಶ್ರೀಪಾದರಾಜ ಯತಿಗಳು ತಮ್ಮ ಗುರುಗಳೊಡನೆ ಈ ಕಾರ್ಪರಕ್ಷೇತ್ರಕ್ಕೆ ಆಗಮಿಸಿದ್ದ ವಿಷಯ ತಿಳಿದು ಬರುತ್ತದೆ. ಇದೇ ಸಂದರ್ಭದಲ್ಲಿ ಉತ್ತರಾದಿ ಮಠದ ರಘುನಾಥ ತೀರ್ಥರು ಈ ಕ್ಷೇತ್ರಕ್ಕೆ ಆಗಮಿಸಿದರು. ಶ್ರೀಲಕ್ಷ್ಮೀನೃಸಿಂಹದೇವರ ಸನ್ನಿಧಿಯಲ್ಲಿ ಪರಸ್ಪರ ಯತಿವರ್ಯರು ಸೇರಿದ ಸಂದರ್ಭದಲ್ಲಿ ಬಾಲಯತಿ ಶ್ರೀಲಕ್ಷ್ಮೀನಾರಾಯಣಮುನಿ (ಶ್ರೀ ಶ್ರೀಪಾದರಾಜರು)ಗಳ ಅಸ್ಖಲಿತ ವಾಗ್ವೈಖರಿಯನ್ನು, ಪಾಂಡಿತ್ಯವನ್ನು, ಸುಧಾಗ್ರಂಥಾದಿ ತತ್ವಜ್ಞಾನವನ್ನು ಮೆಚ್ಚಿದ ರಘುನಾಥತೀರ್ಥರು ಹರ್ಷಿಸಿದರು. ಶ್ರೀಲಕ್ಷ್ಮೀನಾರಾಯಣಮುನಿ ರಘುನಾಥತೀರ್ಥರನ್ನು ಕುರಿತು ತಾವು ಶ್ರೀಶ್ರೀಗಳವರು, ನಾನು ಚಿಕ್ಕವನು ಎಂದಾಗ ರಘುನಾಥತೀರ್ಥರು "ನಾವು ಶ್ರೀಗಳವರಾದರೆ ನೀನು 'ಶ್ರೀಪಾದರಾಜ' ಎಂದು ಬಿರುದಿತ್ತು ಅಭಿನಂದಿಸಿದರು. ಅಂದಿನಿಂದ ಶ್ರೀ ಶ್ರೀಪಾದರಾಜರೆಂದೇ ಅಭಿಧೇಯ ಪಡೆದು ಭಾರತದಾದ್ಯಂತ ಹರಿದಾಸ ಭಕ್ತಿಪಂಥವನ್ನು, ಧಾರ್ಮಿಕ ಸಾಹಿತ್ಯವನ್ನೂ ಬೆಳೆಸಿದವರು ಶ್ರೀಪಾದರಾಜರು. ಸಂಸ್ಕೃತ ವಾಙ್ಮಯದಲ್ಲಿ ಪ್ರಕಾಂಡ ಪಾಂಡಿತ್ಯ ಪಡೆದಿದ್ದರೂ, ಕೀರ್ತನೆಗಳನ್ನು ಉಗಾಭೋಗ, ಸುಳಾದಿ ಮುಂತಾದ ಗೇಯ

ಸಾಹಿತ್ಯ ಪ್ರಕಾರವನ್ನು ಕನ್ನಡದಲ್ಲಿ ರಚಿಸಿ ಅವುಗಳನ್ನು ಪೂಜಾಸಂದರ್ಭದಲ್ಲಿ, ನರ್ತನರೂಪದಿಂದ ಹೇಳಿಸುವ ಪದ್ಧತಿಯನ್ನು ಜಾರಿಗೆ ತಂದರು. ವೈಷ್ಣವದೀಕ್ಷೆ, ದ್ವೈತತತ್ವಪ್ರಸಾರ, ಭಕ್ತಿಪಂಥದ ಚಾಲಕರಾದ ಶ್ರೀ ಶ್ರೀಪಾದರಾಜರು ಕಾರ್ಪರ ಕ್ಷೇತ್ರದ ಲಕ್ಷ್ಮೀನರಸಿಂಹ ದೇವನನ್ನು ದರ್ಶಿಸಿ ಆರಾಧಿಸಿದ್ದರು.

ಈ ಕಾರ್ಪರ ಕ್ಷೇತ್ರದ ಲಕ್ಷ್ಮೀನರಸಿಂಹ ದೇವನ ಅರ್ಚಕ ಮನೆತನದಲ್ಲಿ ಜನಿಸಿದವರು ಶ್ರೀ ನರಹರಿದಾಸರು. ಇವರ ಹೆಸರು ಶ್ರೀ ಗಿರಿಯಾಚಾರ್ಯರು. ತಂದೆ ಶ್ರೀ ಭೀಮಸೇನಾಚಾರ್ಯರು, ತಾಯಿ ನರಸಮ್ಮ, ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳ ಅಂತರಂಗ ಭಕ್ತರಾದ ಶ್ರೀ ಯಳವೋಲ ವಿಠಲಾಚಾರ್ಯರು ಸದ್ಭಕ್ತರು ವಿದ್ವಾಂಸರೆಂದು ಪ್ರಸಿದ್ಧಿ ಪಡೆದಿದ್ದರು. ಶ್ರೀ ಗಿರಿಯಾಚಾರ್ಯರ ಪ್ರಾರಂಭಿಕ ವಿದ್ಯಾಭ್ಯಾಸವು ಶ್ರೀ ವಿಠಲಾಚಾರ್ಯರ ಹತ್ತಿರ ಜರುಗಿತು. ವ್ಯಾಕರಣ, ಸಾಹಿತ್ಯ, ವೇದಾಂತ ಮುಂತಾದ ಸಂಸ್ಕೃತ–ವಾಙ್ಮಯದಲ್ಲಿ ಪ್ರಾವೀಣ್ಯವನ್ನು ಪಡೆದರು. ಇದರೊಡನೆ ವ್ಯಾಸ ದಾಸ ಸಾಹಿತ್ಯಾಧ್ಯಯನ ಅರ್ಚಕ ವೃತ್ತಿ, ಭಾಗವತ ಪ್ರವಚನದಂತಹ ಭಕ್ತಿಯ ಪರಿಸರದಲ್ಲಿಯೇ, ದಾಸರು ಬಾಳಿದರು. ಭಕ್ತಕವಿಗಳಾದ ದಾಸರು "ತಮ್ಮ ಆರಾಧ್ಯದೇವನಾದ ಶ್ರೀಲಕ್ಷ್ಮೀನರಸಿಂಹ ದೇವರ ಹೆಸರಿನಲ್ಲಿ "ಕಾಪಾರ ನರಹರಿ" ಎನ್ನುವ ಅಂಕಿತವನ್ನು ಹೊಂದಿದರು. ದಾಸರು ಸುಮಾರು ೧೨೦ ಕೀರ್ತನಗಳನ್ನು ರಚಿಸಿದ್ದಾರೆ. ಬಯಲಾಟದಂತಹ ಜಾನಪದ ಮಾಧ್ಯಮದಲ್ಲಿಯೂ ಒಲವುಳ್ಳ ದಾಸರು ಬಯಲಾಟಗಳಿಗೆ ಪದಗಳನ್ನು ರಚಿಸಿಕೊಟ್ಟಿದ್ದಾರೆ. ಇವರ ಕೀರ್ತನಗಳು ಕರ್ನಾಟಕದಾದ್ಯಂತ ಪ್ರಚಲಿತವಿವೆ.

ಶ್ರೀ ನರಹರಿ ದಾಸರಿಂದ ಅಂಕಿತೋಪದೇಶ ಪಡೆದ ಶಿಷ್ಯರು ಇಂದು "ದಾಸ" ಪಥದಲ್ಲಿ ಮುನ್ನಡೆದು ಭಕ್ತಿ ಸಾಹಿತ್ಯವನ್ನು ರಚಿಸಿದ್ದಾರೆ. ಶ್ರೀರಂಗನಾಥದಾಸರು, ಶ್ರೀವೆಂಕಟೇಶದಾಸರು, ಶ್ರೀಲಕುಮೀಶದಾಸರು, "ಶ್ರೀಲಕುಮಿಪ್ರಿಯ" ರು (ಶ್ರೀಮತಿ ಲಕ್ಷ್ಮೀಬಾಯಿ) ದಾಸರನ್ನು ಕುರಿತು ಸ್ತುತಿಪದಗಳನ್ನು ರಚಿಸಿದ್ದಾರೆ.

ಪರಮ ವೇದಾಂತಿಗಳು, ಸದ್ವೈಷ್ಣವದೀಕ್ಷಿತರು, ಸತ್ತತ್ತ್ವ ಪ್ರಸಾರಕರು, ಭಾಗವತ ಧರ್ಮಿಗಳುಯೆನಿಸಿದ ಶ್ರೀನರಹರಿದಾಸರು ಪ್ರಾತಃಸ್ಮರಣೀಯರೆನಿಸಿದ್ದಾರೆ. ಅರ್ಚನ, ಕೀರ್ತನ, ಪ್ರವಚನ, ಮಾಧ್ಯಮಗಳಿಂದ ಭಕ್ತಿಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ದಾಸರು ಕ್ರಿ.ಶ. ೧೮೯೬ ರಿಂದ ೧೯೭೭ವರೆಗೆ ಬಾಳಿದರು. ದಾಸರ ಪತ್ನಿ ಗ.ಭಾ.ಸುಭದ್ರಮ್ಮನವರು ಕೊಪ್ಪರ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ದಾಸರು ಇಬ್ಬರು ಪುತ್ರರನ್ನು ಪಡೆದಿದ್ದು, ಹಿರಿಯರಾದ ಶ್ರೀ ಅನಂತಾಚಾರ್ಯರು ಪಂಡಿತರೆನಿಸಿದರು (ದಿವಂಗತರಾಗಿದ್ದಾರೆ). ಇನ್ನೋರ್ವ ಪುತ್ರರಾದ ಶ್ರೀ ಕೆ.ಜಯಾಚಾರ್ಯರು (ನಿವೃತ್ತ ನಿರ್ದೇಶಕರು, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು) ದಕ್ಷ ಆಡಳಿತಗಾರರೆಂದು ಪ್ರಸಿದ್ಧಿ ಪಡೆದವರು. ತಮ್ಮ ನಿವೃತ್ತ ಜೀವನವನ್ನು ಆಧ್ಯಾತ್ಮಿಕ ಸಾಧನೆಯೊಡನೆ, ಈ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಯಲ್ಲಿ ತೊಡಗಿಸಿದ್ದಾರೆ.

## ಸಂಗ್ರಹ-ಸಂಸ್ಕರಣ-ಸಂಪಾದನೆ

ಈ ಸಂಪುಟದಲ್ಲಿ ಬರುವ ನಾಲ್ಕು ಜನ ಹರಿದಾಸರ ಕೀರ್ತನೆಗಳ ಸಂಗ್ರಹಕ್ಕೆ ಸಂಬಂಧಿಸಿದಂತೆ ಅನೇಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಇಲ್ಲಿಯ ಕೀರ್ತನೆಗಳನ್ನು ಮುಖ್ಯವಾಗಿ ಎರಡು ರೀತಿಯ ಆಕರ ಗಳನ್ನಿಟ್ಟುಕೊಂಡು ಜೋಡಿಸಲಾಗಿದೆ. ಇಲ್ಲಿಯ ಕೆಲವು ದಾಸರ ಕೀರ್ತನೆಗಳು ಈಗಾಗಲೆ ಪ್ರಕಟವಾಗಿವೆ. ಇನ್ನು ಕೆಲವು ದಾಸರ ಕೀರ್ತನೆಗಳು, ಈ ಸಂಪುಟದ ಮೂಲಕ ಮೊದಲಬಾರಿಗೆ ಪ್ರಕಟಗೊಳ್ಳುತ್ತಲಿವೆ. ಇವುಗಳಿಗೆ ಸಂಬಂಧಿಸಿದ ವಿವರಗಳನ್ನು ಗಮನಿಸಬಹುದಾಗಿದೆ.

ಶ್ರೀ ಗೋಕಾವಿ ಅನಂತಾದ್ರೀಶರ ರಚನೆಗಳ ಸಂಗ್ರಹಕ್ಕೆ ಸಂಬಂಧಿಸಿದಂತೆ ಈಗಾಗಲೇ ಪ್ರಕಟವಾಗಿರುವ ಮೂರು ಪದ್ಯಗಳನ್ನು ಆಕರವಾಗಿಟ್ಟುಕೊಳ್ಳಲಾಗಿದೆ. ಅನಂತಾದ್ರೀಶದಾಸರು ವೆಂಕಟೇಶ ಪಾರಿಜಾತ, ಶಿವಪಾರಿಜಾತ, ಧ್ರುವಚರಿತ್ರೆ ಹಾಗೂ ಪ್ರಹ್ಲಾದ ಚರಿತ್ರೆ ಮುಂತಾದ ಕಥನಕಾವ್ಯಗಳನ್ನು, ಕೆಲವು ಕೀರ್ತನೆಗಳನ್ನು

ರಚಿಸಿದ್ದಾರೆ. ಇವುಗಳಲ್ಲಿ ವೆಂಕಟೇಶ ಪಾರಿಜಾತ ಕಥನಕಾವ್ಯವನ್ನು ಗದಗಿನ 'ಹೊಂಬಾಳಿ ಬಂಧುಗಳು' ಪ್ರಕಾಶನದವರು ಕ್ರಿ.ಶ. ೧೯೬೦ ರಲ್ಲಿ ಪ್ರಕಟಿಸಿದ್ದಾರೆ. "ಶ್ರೀ ಕೃಷ್ಣಚರಿತ್ರೆ"ಯನ್ನು ೧೯೩೫ ರಲ್ಲಿ ದಿ॥ ಬಿಂದಾಚಾರ್ಯಜಯತೀರ್ಥಾಚಾರ್ಯ ಗೋಕಾಕ ಇವರು ಪ್ರಕಟಿಸಿದ್ದರು. "ಪ್ರಹ್ಲಾದ ಚರಿತ್ರೆ" ಕಥನಕಾವ್ಯವು ಇದೇ ಪ್ರಕಾಶನದಿಂದ ಕ್ರಿ.ಶ. ೧೯೮೦ರಲ್ಲಿ ಪ್ರಕಟವಾಗಿದೆ. ಇವೆರಡೂ ಪ್ರಕಟಿತ ಕೃತಿಗಳಲ್ಲಿರುವ ಹಾಡುಗಳನ್ನು ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ. ಈ ಪ್ರಕಟಿತ ಹಾಡುಗಳಲ್ಲಿ ಅನೇಕ ಅಶುದ್ಧ ಪಾಠಗಳಿದ್ದು ಅವುಗಳನ್ನು ಪರಿಷ್ಕರಿಸಿ ಶುದ್ಧ ಪಾಠಗಳನ್ನು ಮಾತ್ರ ಇಲ್ಲಿ ಸಂಪಾದಿಸಲಾಗಿದೆ. "ಶಿವಪಾರಿಜಾತ" ಕಥನ ಕಾವ್ಯವು ಜೀರ್ಣಾವಸ್ಥೆಯಲ್ಲಿರುವ ಮುದ್ರಿತ ಕೃತಿಯಾಗಿದ್ದು ಈ ಕೃತಿಯ ಸಂಪಾದಕರ ಪ್ರಕಾಶಕರ ವಿವರಗಳು ತಿಳಿದುಬಂದಿಲ್ಲ. ನಾವು ಕ್ಷೇತ್ರಕಾರ್ಯ ಮಾಡಿದಾಗ ಧ್ವನಿ ಮುದ್ರಿಸಿಕೊಂಡ ವಕ್ತೃಗಳ ಹಾಡುಗಳನ್ನು ಈ ಜೀರ್ಣಗೊಂಡ ಕೃತಿಯೊಂದಿಗೆ ತುಲನೆ ಮಾಡಿನೋಡಿ ಶುದ್ಧ ಪಾಠಗಳನ್ನು ಸಿದ್ಧಪಡಿಸಿ ಈ ಕಾವ್ಯವನ್ನು ಸಂಪಾದಿಸಿಕೊಡಲಾಗಿದೆ. "ಧ್ರುವಚರಿತ್ರೆ" ಕಥನ ಕಾವ್ಯವು ಇದುವರೆಗೆ ಎಲ್ಲಿಯೂ ಪ್ರಕಟವಾಗಿರುವುದಿಲ್ಲ. ಇದರ ಮೂಲ ಪ್ರತಿಯನ್ನು ನಾವು ಶ್ರೀ ಜಯತೀರ್ಥ ಅಷ್ಟಪುತ್ರೆ, ಗೋಕಾಕ, ಇವರಿಂದ ಪಡೆದುಕೊಂಡಿದ್ದೇವೆ. ಈ ಹಸ್ತಪ್ರತಿ ದೇವನಾಗರಿ ಲಿಪಿಯಲ್ಲಿದೆ. ಈ ಹಸ್ತಪ್ರತಿಯನ್ನು ಪರಿಷ್ಕರಿಸಿ ದೇವನಾಗರಿ ಲಿಪಿಯಿಂದ ಕನ್ನಡ ಲಿಪಿಗೆ ಬದಲಾಯಿಸಿ ಅದರ ಶುದ್ಧ ಪಾಠವನ್ನು ಇಲ್ಲಿಕೊಡಲಾಗಿದೆ. ಶ್ರೀ ತುಳಜಾಮಹಾತ್ಮೆ ಹಸ್ತಪ್ರತಿಯನ್ನು ಉದಯ ಆಚಾರ ಗೋಕಾಕರಿಂದ ಸಂಗ್ರಹಿಸಲಾಗಿದ್ದು ಪ್ರಥಮ ಬಾರಿ ಪ್ರಕಟಗೊಳ್ಳುತ್ತಲಿದೆ. ಅನಂತಾದ್ರೀಶರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆಂಬುದು ಈಗಾಗಲೇ ಸ್ಪಷ್ಟವಾಗಿದೆ. ನಾವು ಕೈಕೊಂಡ ಕ್ಷೇತ್ರಕಾರ್ಯದಲ್ಲಿ ಇವರ ಕೀರ್ತನೆಗಳು ಅಧಿಕ ಸಂಖ್ಯೆಯಲ್ಲಿ ನಮಗೆ ದೊರೆಯುಲಿಲ್ಲ. ಈಗ ಸಧ್ಯಕ್ಕೆ ಏಳು ಕೀರ್ತನೆಗಳನ್ನು ಇದರೊಂದಿಗೆ ಸಂಗ್ರಹಿಸಿಕೊಟ್ಟಿದ್ದೇವೆ. ಈ ಕೀರ್ತನೆಗಳನ್ನು ಶ್ರೀಮತಿ ಲಲಿತಾಬಾಯಿ ಕೊಪ್ಪರ, ಶ್ರೀಮತಿ ಗೋದಾವರಿ ಕಲ್ಲೂರಕರ್, ಡಾ॥ಶೈಲಜಾ ಕೊಪ್ಪರ್, ಶ್ರೀಮತಿ ಶಾಲಿನಿ ಕೊಪ್ಪರ ವಕ್ತೃಗಳಿಂದ ಪಡೆದುಕೊಳ್ಳಲಾಗಿದೆ. ಹಾಗೆ ಪಡೆದುಕೊಂಡ ಕೀರ್ತನೆಗಳನ್ನು ಪರಿಷ್ಕರಿಸಿ ತೆಗೆದುಕೊಳ್ಳಲಾಗಿದೆ.

ಹೆನ್ನೆರಂಗವಿಠಲರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಕ್ರಿ.ಶ. ೧೯೩೯ರಲ್ಲಿ ಕನಕಗಿರಿಯ ರಾಜಗೋಪಾಲಾಚಾರ್ಯರು ಹೆನ್ನೆರಂಗ ವಿಠಲರ ೬೩ ಕೀರ್ತನೆಗಳನ್ನು ಪ್ರಕಟಿಸಿದ್ದಾರೆ. ಹೀಗೆ ಹೆನ್ನೆರಂಗವಿಠಲರ ಕೀರ್ತನೆಗಳಿಗೆ ಸಂಬಂಧಿಸಿದಂತೆ ಇದುವರೆಗೆ ಇದೊಂದೇ ಕೃತಿ ಪ್ರಕಟವಾಗಿದೆ. ಇದು ಕೂಡಾ ಅಪೂರ್ಣವಾಗಿದೆ. ಗುಲಬರ್ಗಾ ಜಿಲ್ಲೆಯ ಸುರಪುರದಲ್ಲಿ ವಾಸಿಸುತ್ತಿರುವ ಶ್ರೀಹರಿರಾವ್ ಆದವಾನಿಯವರು ಆಸಕ್ತಿಯಿಂದ ಕೆಲವು ದಾಸರ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಅವರ ಸಂಗ್ರಹದಿಂದ ಹೆನ್ನೆರಂಗವಿಠಲರ ರಚನೆಗಳನ್ನು ಆಯ್ದುಕೊಂಡು, ಪರಿಷ್ಕರಿಸಿ ಇಲ್ಲಿ ಕೊಡಲಾಗಿದೆ. ಪರಿವಿಡಿಯಲ್ಲಿ ಎರಡುನೂರು ಕೀರ್ತನೆಗಳ ಪ್ರಸ್ತಾಪವಿದ್ದರೂ ಅದರಲ್ಲಿ ಕೆಲಕೀರ್ತನೆಗಳು ಅಳಿಸಿ ಹೋಗಿವೆ. ಹೀಗಾಗಿ ಒಂದು ನೂರಾ ಎಂಬತ್ತೈದು ಕೀರ್ತನಗಳನ್ನು ಮಾತ್ರ ನಮಗೆ ಸಂಪಾದಿಸಿಕೊಡಲು ಸಾಧ್ಯವಾಗಿದೆ. ಶ್ರೀ ಶ್ರೀಹರಿರಾವ್ ಆದವಾನಿಯವರಿಂದ ನಮಗೆ ದೊರೆತಿರುವ ಈ ಹಸ್ತಪ್ರತಿ ತೆಲುಗು ಲಿಪಿಯಲ್ಲಿದೆ. ಇದನ್ನು ಕನ್ನಡ ಲಿಪಿಗೆ ಅಳವಡಿಸಿ, ಪಾಠಾಂತರಗಳನ್ನು ಪರಿಷ್ಕರಿಸಿ ಭಾವಾರ್ಥವನ್ನು ಜೋಡಿಸಿ ಸಂಪಾದಿಸಿ ಕೊಡಲಾಗಿದೆ. ಹೆನ್ನೆರಂಗವಿಠಲರು, ಶತಕಗಳನ್ನು ಹಾಗೂ ಸೀಸಪದ್ಯಗಳನ್ನು ರಚಿಸಿರುವುದು ತಿಳಿದು ಬರುತ್ತದೆ. ಕನಕಗಿರಿಯ ರಾಜಗೋಪಾಲಚಾರ್ಯರು ಸಂಪಾದಿಸಿ ಪ್ರಕಟಿಸಿರುವ ಕೃತಿಯಲ್ಲಿ ಶತಕ ಹಾಗು ಸೀಸಪದ್ಯಗಳನ್ನು ನೋಡಬಹುದಾಗಿದೆ. ಈ ಸಂಪುಟವು ಕೀರ್ತನೆಗಳ ಪ್ರಕಟಣೆಗೆ ಮಾತ್ರ ಸೀಮಿತವಾಗಿರುವುದರಿಂದ ನಾವಿಲ್ಲಿ ಅವರ ಕೀರ್ತನೆಗಳನ್ನು ಮಾತ್ರ ಸಂಪಾದಿಸಿ ಕೊಟ್ಟಿದ್ದೇವೆ.

ಅಸ್ಕಿಹಾಳ ಗೋವಿಂದದಾಸರು ಕೀರ್ತನೆಗಳನ್ನು ರಚಿಸಿರುವುದಲ್ಲದೆ ಬಯಲಾಟ, ಗೀಗಿಪದ, ಲಾವಣಿಗಳನ್ನು ಕೂಡಾ ರಚಿಸಿದ್ದಾರೆ. ಮೂವತ್ತು ಕೀರ್ತನಗಳನ್ನೊಳಗೊಂಡ ಕೃತಿಯೊಂದು ೧೯೭೮ರಲ್ಲಿ ರಾಯಚೂರಿನ "ಶ್ರೀಕೋಟೆ ಗುರುರಾಜ ಭಜನಾಮಂಡಳಿ"ಯುವರಿಂದ ಪ್ರಕಟಗೊಂಡಿದೆ ಗೋವಿಂದದಾಸರ ಮನೆತನದವರು ಈಗ ರಾಯಚೂರಿನಲ್ಲಿ ವಾಸಿಸುತ್ತಿದ್ದಾರೆ. ಅವರನ್ನು ಭೇಟಿಯಾಗಿ ನಾವು ಅವರಿಂದ ಗೋವಿಂದ ದಾಸರ ಕೀರ್ತನೆಗಳ ಹಸ್ತ ಪ್ರತಿಯನ್ನು ಪಡೆದುಕೊಂಡಿದ್ದೇವೆ. ಈ ಹಸ್ತಪ್ರತಿ ಹಾಗೂ ಈಗಾಗಲೇ

ಪ್ರಕಟಿತವಾಗಿರುವ ಕೀರ್ತನೆಗಳ ಸಂಕಲನ ಇವೆರಡನ್ನೂ ಇಲ್ಲಿ ಆಕರವಾಗಿಟ್ಟು ಕೊಳ್ಳಲಾಗಿದೆ. ಎರಡೂ ಆಕರಗಳ ಮೂಲಕ ಪರಿಷ್ಕರಣೆಯನ್ನು ಮಾಡಿ ಅಂತಿಮವಾಗಿ ಮೂವತ್ತು ಕೀರ್ತನೆಗಳನ್ನು ಇಲ್ಲಿ ಸಂಪಾದಿಸಿಕೊಡಲಾಗಿದೆ.

ಕಾರ್ಪರ ನರಹರಿದಾಸರು ಅನೇಕ ಕೀರ್ತನೆಗಳನ್ನು, ಬಯಲಾಟದ ಹಾಡುಗಳನ್ನು ರಚಿಸಿದ್ದಾರೆ. ರಾಯಚೂರಿನ ಕೋಟೆ ಭಜನಾ ಮಂಡಳಿಯವರು ಈಗಾಗಲೇ ಇವರ ಒಂದನೂರಾ ಹದಿನಾಲ್ಕು ಕೀರ್ತನೆಗಳನ್ನು ೧೯೮೪ರಲ್ಲಿ ಪ್ರಕಟಿಸಿದ್ದಾರೆ. ಕಾರ್ಪರ ನರಹರಿದಾಸರ ಮಕ್ಕಳಾದ ಶ್ರೀ.ಕೆ ಜಯಾಚಾರ್ಯ ಹಾಗೂ ದಾಸರ ಅಳಿಯಂದಿರಾದ ಶ್ರೀ ಕೆ.ಎನ್.ಆಚಾರ್ಯ ಇವರು ಸಂಗ್ರಹಿಸಿದ ಹಸ್ತ ಪ್ರತಿಗಳನ್ನು ಇಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಇವೆರಡೂ ಆಕರಗಳಿಂದ ಶುದ್ಧ ಪಾಠವನ್ನು ಗುರುತಿಸಿ ಇತ್ತೀಚೆಗೆ ದೊರೆತ ಅವರ ಆರು ಕೀರ್ತನೆಗಳನ್ನು ಇದಕ್ಕೆ ಜೋಡಿಸಿ ಕಾರ್ಪರ ನರಹರಿದಾಸರ ಒಟ್ಟು ನೂರಾಇಪ್ಪತ್ತು ಕೀರ್ತನಗಳನ್ನು ಇಲ್ಲಿ ಕಟ್ಟಿಕೊಡಲಾಗಿದೆ.

ಈ ಸಂಪುಟದಲ್ಲಿ ಬರುವ ನಾಲ್ಕುಜನ ಹರಿದಾಸರ ರಚನೆಗಳನ್ನು ಇತರ ದಾಸರ ರಚನೆಗಳೊಂದಿಗೆ, ಹೋಲಿಸಿ ನೋಡಿದಾಗ ಕೆಲವು ವಿಶಿಷ್ಟ ಸಂಗತಿಗಳು ಬೆಳಕಿಗೆ ಬರುತ್ತವೆ. ದಾಸ ಸಾಹಿತ್ಯದ ಮೊದಲಿನ ಘಟ್ಟಗಳಿಗೆ ಭಿನ್ನವಾಗಿ ನಿಲ್ಲುವ ಈ ದಾಸರ ಸಾಹಿತ್ಯ ರಚನೆಗಳಲ್ಲಿ ಜಾನಪದ ಪ್ರಭಾವವನ್ನು ಕಾಣಬಹುದಾಗಿದೆ. ದ್ವೈತಸಿದ್ಧಾಂತವು ಜನಪದ ರೂಪಗಳ ಮುಖಾಂತರ ಇಲ್ಲಿ ಕಾಣಿಸಿಕೊಂಡಿದೆ. ಶಿಷ್ಟಪರಂಪರೆಯ ಪುರಾಣ, ಶತಕ, ಕೀರ್ತನೆಗಳಿರುವಂತೆ ಜನಪದ ಪರಂಪರೆಯ ಪಾರಿಜಾತ, ಲಾವಣಿ, ಬಯಲಾಟದಂತಹ ಜನಪದ ರೂಪಗಳೂ ಈ ಹರಿದಾಸರಲ್ಲಿ ಬಳಕೆಯಾಗಿವೆ.

೧೮-೧೯ನೇ ಶತಮಾನ ಕನ್ನಡ ಸಾಹಿತ್ಯದ ಶಿಷ್ಟ ಪರಂಪರೆಯಲ್ಲಿ ಅಂತಹ ಮಹತ್ವದ ಕಾಲವಾಗಿರದಿದ್ದರೂ ತತ್ವಪದ ಸಾಹಿತ್ಯ, ಕೀರ್ತನ ಸಾಹಿತ್ಯದಂತಹ ಕ್ಷೇತ್ರಗಳಲ್ಲಿ ಬಹಳ ಮಹತ್ವ, ಬೆಳವಣಿಗೆಯುನ್ನು ಈ ಸಂದರ್ಭದಲ್ಲಿ ಕಾಣಬಹುದಾಗಿದೆ. ದೇಶದಾದ್ಯಂತ ಪಾಶ್ಚಾತ್ಯರ ರೋಮ್ಯಾಂಟಿಕ್ ಪ್ರಭಾವ

ತೀವ್ರಗೊಳ್ಳುತ್ತಿರುವ ಸಂದರ್ಭದಲ್ಲಿ ಈ ಪ್ರದೇಶದ ಕವಿಗಳು, ಕೀರ್ತನಕಾರರು ದೇಶೀಯ ರೂಪಕಗಳೊಂದಿಗೆ ಬದುಕಿನ ಹುಡುಕಾಟವನ್ನು ಪ್ರಾರಂಭಿಸಿದ್ದು ತುಂಬ ಗಮನಾರ್ಹವಾದ ಸಂಗತಿಯಾಗಿದೆ.

ದಕ್ಷಿಣ ಕರ್ನಾಟಕದ ಹಾಗೂ ಮುಂಬಯಿ ಕರ್ನಾಟಕ ಕಡೆ ಪಾಶ್ಚಾತ್ಯ ಸಾಹಿತ್ಯ ತುಂಬ ಪ್ರಭಾವಬೀರಿದ ಸಂದರ್ಭದಲ್ಲಿ ಈ ಹೈದ್ರಾಬಾದ ಕರ್ನಾಟಕದ ಪ್ರದೇಶದಲ್ಲಿ ಕೀರ್ತನಕಾರರು, ತತ್ವಪದಕಾರರು, ತಮ್ಮ ದೇಶೀಯರೂಪಗಳ ಮೂಲಕವೇ ಹೊಸ ಚಿಂತನೆಯನ್ನು ಪ್ರಾರಂಭಿಸಿದ್ದು ಹಾಗೂ ಇವರ ರಚನೆಗಳು ಜನಸಮುದಾಯದ ನಾಲಿಗೆಯ ಮೇಲೆ ನರ್ತಿಸಿದ್ದು ಇವತ್ತಿನ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ.

ಭಕ್ತಿ ಅಧ್ಯಾತ್ಮದಂತಹ ವಿಷಯಗಳು ಇಲ್ಲಿಯ ಜನ ಸಮುದಾಯದಲ್ಲಿ ಸಹಿಷ್ಣುತೆ, ಭಾವೈಕ್ಯತೆಯನ್ನು ಮೂಡಿಸಿದ್ದು ಮಹತ್ವದ ಸಂಗತಿಯಾಗಿದೆ. ದಾಸ ಸಾಹಿತ್ಯದ ಪರಂಪರೆಯಲ್ಲಿ ಅನೇಕ ಕೀರ್ತನಕಾರರು ಬೇರೆ ಬೇರೆ ಜಾತಿ-ಮತಗಳಿಂದ ಹುಟ್ಟಿಬಂದಿರುವುದು ಗಮನಿಸುವ ವಿಷಯವಾಗಿದೆ. ದಾಸ ಸಾಹಿತ್ಯದ ಮೊದಲನೇ ಘಟ್ಟದಲ್ಲಿ ಕುರುಬ ಜನಾಂಗದಿಂದ ಕನಕದಾಸ ಮಹತ್ವದ ಕೀರ್ತನಕಾರನಾದರೆ ೧೯ನೆ ಶತಮಾನದಲ್ಲಿ ಹೈದ್ರಾಬಾದ ಕರ್ನಾಟಕ ಪ್ರದೇಶದ ಪಿಂಜಾರ ಜನಾಂಗದಿಂದ ಬಂದ ರಾಮದಾಸನು ದ್ವೈತಮತದ ವಿಶಾಲತೆಗೆ ಸಾಕ್ಷಿಯಾಗಿದ್ದಾನೆ. ವೈಷ್ಣವ ಮನೆತನದಲ್ಲಿ ಜನಿಸಿದ ಅನಂತಾದ್ರೀಶರು ಶಿವಪಾರಿಜಾತದಂತಹ ಕಥನಕಾವ್ಯವನ್ನು ರಚಿಸಿರುವುದು ಮಹತ್ವದ ಸಂಗತಿಯಾಗುತ್ತದೆ. ಜನಪದ ಮೌಲ್ಯಗಳಿಂದ ಬಂದ ಇಂತಹ ಕೀರ್ತನಕಾರರು ತಮ್ಮ ಕೀರ್ತನೆಗಳ ಮೂಲಕ ಜನಸಮುದಾಯಕ್ಕೆ ಹತ್ತಿರವಾಗಿದ್ದಾರೆ. ಹರಿ-ಹರ ಎಂಬ ಭೇದವನ್ನು ಬಿಟ್ಟು ಜಾತಿ-ಮತಗಳ ಹಂಗನ್ನು ತೊರೆದು ಮಾನವೀಯತೆಗೆ ಪ್ರಾಮುಖ್ಯ ನೀಡಿದ್ದು, ಆಧ್ಯಾತ್ಮದ ಎತ್ತರವನ್ನೇರಿದ್ದು ಗುರುತಿಸುವಂಥ ವಿಷಯವಾಗಿದೆ.

ಈ ಸಂಪುಟದ ಹರಿದಾಸರು ವಸ್ತು, ಅಭಿವ್ಯಕ್ತಿ, ಭಾಷೆ ಆಶಯ ಇವುಗಳಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಅನಂತಾದ್ರೀಶರು ರಚಿಸಿರುವ

ನಾಲ್ಕು ಸುದೀರ್ಘ ಕಥನಕಾವ್ಯಗಳಲ್ಲಿ ಪುರಾಣದ ಮೂಲಕ ಭಕ್ತಿ ಪರಂಪರೆಯನ್ನು ಪರಿಣಾಮಕಾರಿಯಾಗಿ ತಿಳಿಸಿದ್ದಾರೆ. ೧೮-೧೯ನೇ ಶತಮಾನದ ಸಂದರ್ಭದಲ್ಲಿ ಮೂಡಿ ಬಂದ ಈ ಕಲ್ಯಾಣ ಹಾಗೂ ಪರಿಣಯಕ್ಕೆ ಸಂಬಂಧಪಟ್ಟ ಕಥಾವಸ್ತು ಹೆಚ್ಚು ಕುತೂಹಲವನ್ನುಂಟು ಮಾಡುತ್ತದೆ. ವೆಂಕಟೇಶ, ಶಿವ, ಧ್ರುವ, ಪ್ರಹ್ಲಾದ ಮೊದಲಾದ ಮಹಿಮರನ್ನು ಈ ಕವಿ ಸಾಮಾನ್ಯ ಜನತೆಯಲ್ಲಿರುವ ಭಕ್ತಿಯ ಅನಂತತೆಯಲ್ಲಿ ಕಂಡುಕೊಳ್ಳುತ್ತಾರೆ. ಹೀಗಾಗಿ ಈ ಶಿವ ವೆಂಕಟೇಶರು ನಮ್ಮ ಸುತ್ತಮುತ್ತಲಿನ ಮಹತ್ವದ ಸಾಧಕರಂತೆ ಕಾಣಿಸುತ್ತಾರೆ. ಹೀಗೆ ಪುರಾಣವನ್ನು ವಾಸ್ತವದ ಮೂಲಕ ಕಟ್ಟಿಕೊಡುವ ಅನಂತಾದ್ರೀಶರ ಕಥನಕವನಗಳು ದಾಸ ಸಾಹಿತ್ಯ ಪರಂಪರೆಯಲ್ಲಿಯೇ ವಿಶಿಷ್ಟ ರಚನೆಗಳಾಗಿ ಕಾಣಿಸಿಕೊಳ್ಳುತ್ತವೆ. ಇಂತಹುದೇ ಪರಂಪರೆಯನ್ನು ಮುಂದುವರೆಸಿದ ಕಾರ್ಪರ ನರಹರಿ ದಾಸರು ಸಮಗ್ರ ಭಾಗವತ ಪುರಾಣವನ್ನು ಕೇವಲ ೧೮ ನುಡಿಗಳಲ್ಲಿ ಕಟ್ಟಿಕೊಟ್ಟಿರುವುದು ಅವರ ಕಥನಕಲೆಗೆ ಸಾಕ್ಷಿಯಂತಿದೆ. ಹೆನ್ನೆರಂಗದಾಸರ ಹಾಗೂ ಅಸ್ಗಿಹಾಳ ಗೋವಿಂದದಾಸರ ಕೀರ್ತನೆಗಳಲ್ಲಿ ಈ ಪ್ರದೇಶದ ಭಾಷೆ ಮೈಕೊಡವಿ ನಿಂತಿದೆ. ಅನೇಕ ಲಾವಣಿ, ಬಯಲಾಟಗಳನ್ನು ಬರೆದಿರುವ ಗೋವಿಂದ ದಾಸರು ಜನಪದ ನುಡಿಗಟ್ಟಿನ ಮೂಲಕ ಕೀರ್ತನ ಪರಂಪರೆಯನ್ನು ಬೆಳೆಸಿರುವುದು ಕುತೂಹಲಕಾರಿಯಾದ ಸಂಗತಿಯಾಗಿದೆ.

ಈ ಸಂಪುಟದ ಹರಿದಾಸರ ರಚನೆಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ನಡೆದಿರುವದಿಲ್ಲ. ಇವರ ರಚನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದಾಗ ಇನ್ನೂ ಹೊಸ ಸಂಗತಿಗಳು ಬೆಳಕಿಗೆ ಬರುವ ಸಾಧ್ಯತೆ ಇದೆ, ನಡೆ ನುಡಿ ಒಂದಾಗಿ ಸರಳ ಜೀವನ ನಡೆಸಿ ತಮ್ಮ ಅನುಭಾವದ ಅಂತಃಸತ್ವವನ್ನು ಧಾರೆಯೆರೆದು ಕೊಟ್ಟಿರುವ ಇಲ್ಲಿಯ ದಾಸರು ಅಧ್ಯಯನ ಯೋಗ್ಯರಾಗಿದ್ದಾರೆ. ಜ್ಞಾನ, ಭಕ್ತಿ ಸಾಧನೆಗೆ ಇಂತಹ ದಾಸರ ರಚನೆಗಳು ಸ್ಫೂರ್ತಿದಾಯಕವಾಗಿವೆ.

# ಕೃತಜ್ಞತೆಗಳು

ಈ ಸಂಪುಟದ ಹರಿದಾಸರ ಕೀರ್ತನೆಗಳನ್ನು ಸಂಪಾದಿಸಿಕೊಡಲು ನಮಗೆ ತಿಳಿಸಿದ ಕಾರ್ಯನಿರ್ವಾಹಕ ಸಂಪಾದಕರಾದ ಡಾ.ಶ್ರೀನಿವಾಸ ಹಾವನೂರು ಅವರಿಗೆ ಇಂತಹ ಮಹತ್ವದ ಯೋಜನೆಯನ್ನು ಕೈಗೊಂಡು ಈ ಯೋಜನೆಯಲ್ಲಿ ಭಾಗವಹಿಸುವ ಅವಕಾಶವನ್ನಿತ್ತ ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಿಗೆ ಅನಂತ ಕೃತಜ್ಞತೆಗಳು ಸಲ್ಲುತ್ತವೆ. ಸಮಗ್ರ ದಾಸವಾಙ್ಮಯ ಯೋಜನೆಯ ಸಮಿತಿಯ ಎಲ್ಲ ಸದಸ್ಯರುಗಳಿಗೂ ನಾವು ಋಣಿಯಾಗಿದ್ದೇವೆ.

ಈ ಸಂಪುಟದ ಹರಿದಾಸರ ರಚನೆಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ಅನೇಕರು ಸಹಾಯ ಸಹಕಾರ ನೀಡಿದ್ದಾರೆ. ಅವರಲ್ಲಿ ಪ್ರಮುಖವಾಗಿ ಸುರಪುರದ ಶ್ರೀಹರಿ ಕುಲಕರ್ಣಿ, ಗೋಕಾಕದ ಶ್ರೀಜಯತೀರ್ಥ ಅಷ್ಟಮಿತ್ರೆ. ರಾಯಚೂರಿನ ಭೀಮದಾಸ, ಕೊಪ್ಪರದ ಶ್ರೀ ಕೆ. ಜಯಾಚಾರ್ಯರು ಇವರ ಸಹಾಯ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಶ್ರೀ ಹೆನ್ನೆರಂಗದಾಸರ ಎರಡುನೂರು ಕೀರ್ತನೆಗಳು ಪ್ರಪ್ರಥಮವಾಗಿ ಈ ಸಂಪುಟದ ಮೂಲಕ ಬೆಳಕು ಕಾಣುತ್ತಿರುವುದು ನಮಗೆ ಹೆಮ್ಮೆಯ ಸಂಗತಿಯಾಗಿದೆ. ಅದರಂತೆ ಅನಂತಾದ್ರೀಶರ "ಧ್ರುವಚರಿತ್ರೆ" ಕಥನಕಾವ್ಯವು ಇದೇ ಮೊದಲಬಾರಿಗೆ ಈ ಸಂಪುಟದ ಮೂಲಕ ಪ್ರಕಟವಾಗುತ್ತಿದೆ. ನಾವು ಎಷ್ಟೇಶ್ರಮವಹಿಸಿದ್ದರೂ ಈ ದಾಸರ ಚರಿತ್ರೆಯನ್ನು ಇಡಿಯಾಗಿ ಕಟ್ಟಿಕೊಡಲಿಕ್ಕೆ ಆಗಲಿಲ್ಲ. ಪಾಠ ಪರಿಷ್ಕರಣೆಯಲ್ಲಿ ಕೆಲವು ದೋಷಗಳು ಉಳಿದುಕೊಂಡಿರಬಹುದಾಗಿದೆ. ಓದುಗರು, ವಿಮರ್ಶಕರು ದಯವಿಟ್ಟು ತಮ್ಮ ರಚನಾತ್ಮಕ ಸಲಹೆಗಳನ್ನು ನೀಡಬೇಕೆಂದು ಕೋರುತ್ತೇವೆ. ಈ ಸಂಪುಟವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಎಲ್ಲರಿಗೂ ನಮ್ಮ ಅನಂತ ಕೃತಜ್ಞತೆಗಳು.

**ಡಾ. ಬಸವರಾಜ ಸಬರದ**

**ಡಾ. ಜಯಲಕ್ಷ್ಮಿ ಮಂಗಳಮೂರ್ತಿ**

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

## ವ್ಯಾಸಕೂಟ–ದಾಸಕೂಟ ಮತ್ತು ಇತರ ಗುರುಗಳ ಸ್ತೋತ್ರ

## ಲೋಕನೀತಿ



## ತತ್ತ್ವಪ್ರತಿಪಾದನೆ

## ಗಣೇಶ ಪ್ರಾರ್ಥನೆ

### ೧

ನಿರ್ವಿಘ್ನ ನೀಡೋ ನಭದೀಶಾ ಪ

ಗಜಮುಖ ಅಗಜ ಅಂಗಜ ಮೃದ್ಭವ
ಗಜವರದನ ನಿಜ ದಾಸ ೧

ನಾಕಪವಂದ್ಯ ಪಿನಾಕಿಧರನುತ
ಏಕದಂತ ಧೃತ ಪಾಶಾ ೨

ಶಿರಿಗೋವಿಂದ ವಿಠಲನ ದಾಸರಿಗೆ
ಶಿರಿದ ನಿಖಿಳ ಭಯ ನಾಶ ೩

## ಶ್ರೀಹರಿ ಸಂಕೀರ್ತನೆ

### ೨

ಪತಿತ ಪಾವನ ಗೋವಿಂದ
ನಮ್ಮ ಪದುಮದಳಾಕ್ಷ ಸದಾನಂದ ಪ

ಸತಿಪತಿ ನುತ ಸಾರ್ವಭೌಮ ಸು
ವೃತಾ ಚರಣ ಘನ ರಾಜಿತ ಸುಂದರ ಅ.ಪ

ಧೀರನಮೋ ಸುವಿಚಾರ ನಮೋ
ಯದುವೀರ ನಮೋ ರಜದೂರ ನಮೋ
ಮಾರನಮೋ ಗಂಭೀರ ನಮೊ ಭವಹಾರ ನಮೋ
ಸುವಿಚಾರನಮೊ ದಧಿಚೋರ ನಮೋ ೧

ಜನನ ಮರಣ ಜರ ರಹಿತ ನಮೋ ಪಾವನ ಪದ
ಪಂಕೇರುಹ ನಯನ ನಮೋ
ಮನ ವಚನಕೆ ಸಿಗದ ನಿಮಿಷ ಪತಿ
ನಿನ್ನನೆ ಬೇಡುವೆ ಪೊರೆಯೆನುತ ಕರಮುಗಿದು ೨

ರಾಮ ರಾವಣಾಂತಕ ಶೌರಿ ಶುಭ
ನಾಮ ಭಕ್ತ ಜನ ಹಿತಕಾರಿ
ಸಾಮ ವಂದ್ಯ ಸುತ್ರಾಮ ಅನುಜ ನಿ
ಸ್ಸೀಮ ಮಹಿಮ ಶಿರಿಧಾಮ ಅನಘ ನಮೊ ೩

ಅನ್ಯನೆ ನಾ ನಿನ್ನಗೆ ದೇವ ಸಾಮಾನ್ಯನೆ
ಅಭಿಮನ್ಯುನ ಮಾವಾ
ಇನ್ನೆನೆನ್ನದೆ ನಿನ್ನಿಂ ಲಭಿಸಿದ
ನುಣ್ಣುವ ಯನ್ನನು ಮನ್ನಿಸದಿರುವರೆ ೪

ಹಿರಿಯರ ದಯವಿರುವುದು ಸರೆ
ನೀ ಪೊರೆವಿ ಬಿಡದೆ ಯಂಬೋದು ಖರೆ
ಸ್ವರಸ್ವರ ಘಸಿದಾಲ್ವರಿದ ಮೇಲೆ ಸುಧೆ ಗರಿವರ
ತೆರ ಚರಿಪುದು ಧರವೆ ೫

ದಾಸರ ಪೊರೆಯಲು ದಾಶರಥೇ
ನೀ ಬ್ಯಾಸರ ಬಿಡುವರೆ ಅಮಿತ ಮತೆ
ಶ್ರೀಶಾನಿಮಿತ್ಯ ಬಂಧುಯೆನಿಸಿ
ಉದಾಸಿಸೆ ಆಗಮ ರಾಶಿಗೆ ಶೋಭವೆ ೬

ಘಾಸಿಗೊಳಿಸುವರೆ ಸೈಸೈಸೈ ನೀ
ನೀಶನಾದದಕೆ ಫಲವೇನೈ
ಪೋಷಕ ನೀನೆಂದಾಸಿಸಿದವರನು
ನೀ ಸಲಹದೆ ಬರೆ ಸೋಸಿಲಿ ಮೆರೆವರೆ ೭

ಧೃವನ ಪೊರೆದ ಬಲುವೇನಾಯ್ತೈ
ಉದ್ಧವಗೆ ವಲಿದ ದಯ ಏಲ್ಹೊಯತ್ತೈ
ಬವರದೊಳಗೆ ಪಾಂಡವರ ಕಾಯ್ದ ಮತಿ ಸವಿಯುತೆ
ಪವನಪಸವಿದ ಸತತ ಸುಖ ೮

ಘನ್ನ ಕರುಣಿ ನೀ ನಹುದೇನೊ
ಆಪನ್ನ ರಾಪ್ತ ನೀ ನಿಜವೇನೋ
ಸೊನ್ನೊಡಲಾಂಡಗ ನೀನಾದರೆ ಗತ
ಮನ್ಯುನಾಗಿ ಜವ ನಿನ್ನನೆ ತೋರಿಸು ೯

ತಂದಿನ ಪಾಲಿಸಿ ಮಗನನ್ನು ಬೇಕೆಂದು
ಕೊಂದ ಕೃಷ್ಣನೆ ನೀನು
ಹಿಂದಿನ ತೆರ ಎನ್ನಂದವ ಕಡಿಸದೆ
ತಂದು ತೋರೊತವ ಸುಂದರ ಪದಯುಗ ೧೦

ಕಂದುಗೊರಳನುತ ಪೊರೆಯೆಂದು
ಬಲು ವಂದಿಸಿದರು ತ್ವರ ನೀ ಬಂದು
ಕಂದನ ಕರದ್ಯಾಕೆಂದು ಕೇಳ್ದದಕೆ
ನೊಂದು ಬಿಡಿ ನುಡಿ ಗಳೆಂದೆನು ಕ್ಷಮಿಸೈ ೧೧

ಬಲು ಮಂದಿನ ಸಲಹಿದಿ ನೀನು
ಅವರೊಳಗೆ ಓರ್ವನಾನಲ್ಲೇನೊ
ನೆಲೆಗಾಣದೆ ತವ ಜಲಜ ಪಾದ
ಹಂಬಲಿಸುವರರ್ಥವ ಸಲಿಸದೆ ಬಿಡುವರೆ ೧೨

ಬೇಡಿಕೊಂಬುವದೊಂದೆ ಬಲ್ಲೆ
ಅದುಕೂಡಾ ತಿಳಿದು ನೋಡಲು ಸುಳ್ಳೆ
ಬೇಡಿ ಬೇಡಿಸುವಿ ಮಾಡಿ ಮಾಡಿಸುವಿ
ರೂಢಿಪತಿ ನೀನಾಡಿದ ನಾಡುವೆ ೧೩

ನಾಗಶಯನ ನೀ ಬದುಕಿರಲು
ಎನಗಾಗ ಬೇಕೆ ಕಲಬಾಧೆಗಳು
ಸಾಗರಾಂಬರಪ ಸುತನಿಗೆ ಪುರ ಜನ
ಬಾಗದೆ ಅಣಕಿಸಿಧಾಂಗಲ್ಲವೆ ಇದು ೧೪

ಕರೆದರೆ ಬರುವೆನು ನಿನ್ನಡಿಗೆ ಧಿ
ಕ್ಕರಿಸಲು ಮರುಗುವೆ ಮನದಾಗೆ
ನಿರ್ವಿಣ್ಣನು ಪರತಂತ್ರನು ನಾನಿ
ನ್ನೆರಳಲ್ಲವೆ ಮದ್ಗುರುವರ ವರದಾ ೧೫

ಅಲ್ಲದ ಜನರಿಂದಲಿ ನೀನು ಬರೆ
ಕಲ್ಲಿನ ರೂಪದಿ ಪೂಜಿಯನು
ಗೊಳ್ಳುವ ಬಗೆ ನಾನೊಲ್ಲೆ ನಿನ್ನ ಶಿರಿ
ನಲ್ಲೆ ಸಹಿತ ಬಂದು ನಿಲ್ಲೊ ಅರ್ಚಿಸುವೆ ೧೬

ಕಣ್ಣಲಿ ತವದರ್ಶನ ಅಮೃತ
ಎಂದುಣ್ಣುವೆ ಆದಿನ ಭವ ತ್ರಾತಾ
ಘನ ಕರುಣಿ ಬಾರೆನೆ ಬರುವೆನು
ಎಂದೆನ್ನುವ ಬುಧ ನುಡಿ ನನ್ನಿಯೆನ್ನುವೆನು ೧೭

ಭಿಡೆಯ ಬಾರದೆ ಬಲು ಘನ್ನಾ
ನಾನುಡಿಯು ವಡ್ಡಿ ಬೇಡಿದರನ್ನ
ಕೊಡಗೈಯವನಿಗೆ ಲೋಭವು
ಎಲ್ಲಂದಡರಿತು ನುಡಿ ನುಡಿ ಕಡಲಜಳೊಡೆಯನೆ ೧೮

ನ್ಯಾಯಕೆ ಅಧಿಪ ನೀನೆ ಜೀಯಾ
ಅನ್ಯಾಯಕೆ ಪೇಳುವರಾರೈಯ್ಯ
ಮಾಯವೆಂಬೊ ಘನ ಘಾಯವುಎನ್ನನು
ನೋಯಿಸುತಿದೆ ಜವಮಾಯಿ ಸುಭೀಷಿಜನೆ ೧೯

ವರುಣಗೆ ವಾರಿಯು ನೀನಯ್ಯ ದಿನ
ಕರನಿಗೆ ಮಿತ್ರನು ನೀನಯ್ಯ
ಸುರಪಗೆ ಇಂದ್ರನು ಉರಗಕೆ ಶೇಷನು
ಸರ್ವವು ನೀನೆಂದರಿತೆನು ಕರುಣಿಸು ೨೦

ಹನುಮಗೆ ಪ್ರಾಣ ಮೂರೊಂದು
ಆನನನಿಗೆ ವೇಧನು ನೀನಂದು
ಮನಸಿಗೆ ನೀ ಮನ ಜೀವಕೆ ಜೀವನ
ಎನುತ ಅರಿದು ನಮೊ ಎನ್ನುವೆ ಕರಮುಗಿದು ೨೧

ಮೂಗಣ್ಣಗೆ ರುದ್ರನು ನೀನೆಧರೆ
ಆಗಸ ಸಾಗರ ಧಾರಕನೆ
ಶ್ರೀ ಗುರು ರಘುಪತಿ ರಾಗ ಪಾತ್ರ
ನೀನಾಗಿ ಎನ್ನ ಭವ ನೀಗದೆ ಬಿಡುವರೆ ೨೨

ಪದುಮನಾಭ ನಿನ್ನನು ಕುರಿತು ನಾ
ನೊದರುವ ನುಡಿಗಳು ಚಿತ್ರವತು
ವಿಧಿಪತ್ರವನಾಂತು ನಿನ್ನ ಪಾದ
ವದಗಿಸದಲೆ ಬರೆ ಪದವೆನಿಸಿದವೆ ೨೩

ಸ್ತವನಕೆ ವಲಿಯದೆ ಇರೆ ನಮನ
ಗೈಯುವೆ ಇಕೊ ನೋಡೆ ದಾಸ್ಯತನಾ
ಅವನಿಪ ಸರ್ವಕೆ ವಲಿಯದೆ ಇರೆ
ಬೈಯುವೆ ಬಡಿಯುವೆ ಸಿಕ್ಕರೆ ಸೆರೆ ಪಿಡಿಯುವೆ ೨೪

ಚೋರನೆ ನೀ ನಡಗಿದೆಯಾಕೆ
ಸ್ಮೃತಿ ದೂರನೆ ಎನ್ನನು ಮರಿವದೇಕೆ
ಆರು ನಿನಗೆ ವೈಯಾರವು ಈ ಪರಿ
ಕಾರುಣ್ಯದಿ ಕಲಿಸಿದರೋ ಕರಿವರದಾ ೨೫

ಮರೆದಿಯ ನೀ ಕನಿಕರ ಬಡುವ ಸ್ಥಿತಿ ನೀ
ಜರದರೆ ನಮಗಿನ್ನೇನು ಗತಿ
ಪರಿಪರಿ ವರಲು ವರಲಿ ದಯಮಾಡದೆ
ಇರವದು ನಿನ್ನಗೆ ಮರಿಯಾದಿಯೆ ಹರಿ ೨೬

ರೂಪ ತೋರಲೆನ್ನುವಿಯಾ
ಆಹದೆ ಪೇಳಲೊ ಹೇ ವಿಗತಾಗಭಯ
ಪಾಪಬಾರದೆ ಈ ಪರಿಯನ್ನನು
ನೀ ಪಿಡಿಸೆ ಗತತಾಪ ಶ್ರೀಪ ಹರಿ ೨೭

ಸುರತನು ಸಾಕದೆ ಬಿಟ್ಟವಗೆ ತನ್ನ
ಸತಿಯಳ ಖತಿಯೊಳಗಿಟ್ಟವಗೆ
ಕ್ಷಿತಿಯರು ಏನೆನ್ನುವರು ಮನದೊಳಗೆ
ಕೃತಿ ಪತಿ ಯೋಚಿಸಿ ಹಿತಗೈಯನ್ನೊಳು ೨೮

ಶಿರಿಗೋವಿಂದ ವಿಠಲ ಪಾಹಿ
ಗುರುವರ ರಘುಪತಿನುತ ಪದ ಪಾಹಿ
ಬರೆ ಮಾತಲ್ಲವೊ ತ್ವರ ತವ ಪಾದ
ಸಂದರ್ಶನ ಕೊಡದಿರೆ ಸಿರಿ ಸುರರಾಣೆ ೨೯

## ದೇವ–ದೇವತೆಗಳ ಸ್ತುತಿ

### ಲಕ್ಷ್ಮೀ ಸ್ತುತಿ

೩

ನೀನನ್ನ ಹೇಳಬಾರದೇನ ತಾಯಿ
ನೀನನ್ನ ವಾನರ ವಂದಿತ ಶ್ರೀನಿವಾಸಗೆ ಬುದ್ಧಿ ಪ

ಶ್ರೀನಿಧಿ ಪರನೆಂದು ನಂಬಿ ಬಂದ ಬಡ
ಪ್ರಾಣಿಯ ಪೊರೆಯೆಂದು ಜಾನಕಿ ದೇವಿಯೆ ೧

ಮೊರೆ ಹೊಕ್ಕವರ ಕರ ಪಿಡಿವೆನೆಂಬೊ ಘನಾ
ಬಿರುದು ಉಳಿಸಿಕೊ ಎಂದ್ವರುಷದಿ ಸಿರಿದೇವಿ ೨

ಉರಗಶಾಯಿ ಶಿರಿಗೋವಿಂದ ವಿಠಲ ತುರಗಗ್ರೀವ
ನರಹರಿಗೆ ತ್ವರಿತದಲಿ ೩

### ವಾಯುದೇವರ ಸ್ತುತಿ

೪

ಪವಮಾನ ಪವಮಾನ ತವನವ ಪದ
ಪಲ್ಲವ ಜವ ತೋರಿಸೊ ಪ

ಶ್ರೀಕರ ಕಪಿಪ ಪಿನಾಕ ಹರಿಪಾದ
ಕೋಕನದ ಮಧುಪ ಕೃಪಾಕರ ಗುರುವರ ೧

ಕ್ಷುಲ್ಲಕ ಮಲ್ಲಕ ಸು
ದಲ್ಲಣ ದ್ರೌಪದಿ
ವಲ್ಲಭ ಬಲ್ಲಿದ ಬಲ್ಲವರೂಪಿ ೨

ಯತಿಕುಲಪತಿ ದಿತಿ ಸುತ ಮಥನನೆ
ಕ್ಷಿತಿ ಸುತೆ ಪತಿ ಕಥೆಯಲಿ ರತಿ ನೀಡ್ಡಿತದಲಿ ೩

ಪ್ರೇಮದ ಕಾಮದ ರಾಮನ ಕ್ಷೇಮವ
ಭೂಮಿಜೆ ಗರುಪಿದ ವ್ಯೋಮಕೇಶನುತಾ ೪

ಸಾಮಜಪುರ ಪತಿ ತಾಮಸ ಕೌರವ
ಸ್ತೋಮವಳಿದ ಸುತ್ರಾಮಜ ಪ್ರೀಯ ನಮೋ ೫

ಕ್ಷುದ್ರಾ ದ್ವೈತರ ಸದ್ದಳಿದಾಮಲ
ಪದ್ಧತಿಗೈದ ಪ್ರಸಿದ್ಧ ಮದ್ವಮುನಿ ೬

ಸಿಂಧು ದಾಟಿ ಕುರು ವೃಂದ ವಳಿದ
ಕರ್ಮಂದಿಯ ಶಿರಿಗೋವಿಂದ ವಿಠಲಸುತ ೭

೫

ಮುದದಿ ಪಾಲಿಸೊ ಮುದತೀರಥರಾಯಾ
ಸದ್ಬುಧ ಜನಗೇಯಾ ಪ

ಪದುಮನಾಭ ಪದ ಪದುಮ ಮಧುಪ ಸದಯಾ
ಸದಮಲ ಶುಭಕಾಯಾ ಅ.ಪ

ವದಗಿ ರಾಮಕಾರ್ಯದಿ ನೀ ಮನಸಿಟ್ಟಿ
ಲಂಕಾಪುರ ಮೆಟ್ಟಿ ಹೆದರದೆ ದಿತಿಜರನೆಲ್ಲ ಕೊಂದುಬಿಟ್ಟೆ
ಪುಚ್ಛದಿ ಪುರಸುಟ್ಟಿ ಕದನದಿ ಭೀಮ ವೃಕೋದರ
ಜಗಜಟ್ಟಿ ಸಂನ್ಯಾಸತೊಟ್ಟಿ ೧

ಸೀತಾಶೋಕ ವಿನಾಶನ ಮಹಂತಾ
ಮಹಬಲಿ ಹನುಮಂತ

ವಾತಜ ವಾರಿಜ ಜಾತನಾಗುವಂತಾ ಖ್ಯಾತಿಯುಳ್ಳ ವಂಥಾ
ಕೋತಿರೂಪ ಧರ್ಮಾನುಜ
ಜಯವಂತಯತಿನಾಥನೆ ಶಾಂತಾ ೨

ಶಿರಿಗೋವಿಂದ ವಿಠಲನ ಪ್ರೀತಿ ಕಂದಾ
ಭೀಮನೆ ಆನಂದಾಗರಿದು ಮುರಿದು
ಪರಮತವನೆ ಆನಂದಾ ಮುನಿ ರೂಪಬಲಿಂದ
ಶಿರಿರಾಮನ ಸುತ ನರಪ್ರೀಯ ಭರದಿಂದ
ಬದರಿಗೆ ನಡೆತಂದಾ ೩

## ರುದ್ರದೇವರ ಸ್ತುತಿ

೬

ಪಾಲಿಸೆನ್ನ ಕಾಪಾಲಿಯೆ ನೀನು ಪ

ಪಾಲಿಸುಯನ್ನ ಕಾಪಾಲಿಯೆ ತ್ವರ ಗೋಪಾಲನಂಘ್ರಿ
ಯುಗ ವಾಲಗ ಕೊಟ್ಟು ಅ.ಪ

ನೀ ಮಹದೌಷಧಿ ಕಾಮಾದಿಗಳೆಂಬಾಮಯ
ಸ್ತೋಮಕೆ ಹೇ ಮಮಸ್ವಾಮಿ ೧

ನೀ ಕಾಯದೆ ಬಿಡೆ ಕಾಯಜ ಭಯ
ನೂಕೆಯನ್ನ ಕಡೆಗ್ಹಾಕುವರ್‍ಯಾರೈ ೨

ತಿಂಗಳಚೂಡ ತ್ರಿಗಂಗಳ ಶೋಭಿತ
ಅಂಗಜ ರಿಪು ಭಸಿತಾಂಗನೆ ಲಿಂಗಾ ೩

ನಾಕರಮುಗಿಯುವೆನು ನಾಕಪನುತ ರ
ತ್ನಾಕರ ಸುತೆವರನಾ ಕರತಾರೋ ೪

ಕಂದನು ಇವನೆಂತೆಂದು ಎನ್ನ ನೀ
ಮುಂದಕೆ ಕರೆಯೈ ನಂದಿಶ್ಯಂದನಾ ೫

ಅರ್ಧಂಗನ ವಪುಸ್ವರ್ಧುನಿಧರಾ ಅಘ
ಮರ್ದನ ಕಾಯೋ ಕಪರ್ದಿಯೆ ನಿರುತಾ ೬

ಅದ್ರಿಜ ಪತಿ ಮಹರುದ್ರನೆ ನಮಿಸುವೆ
ಕ್ಷುದ್ರ ಮನಸಿನ ಉಪದ್ರವ ಬಿಡಿಸಿ ೭

ದುರ್ಜನರರಿ ಖತಿವರ್ಜಿತ ಪಾಲಿಸೋ
ನಿರ್ಜರನುತನ ಗುರು ಅರ್ಜುನ ವರದಾ ೮

ನೀನೊಲಿಸಿದ ಸಿರಿಗೋವಿಂದವಿಠಲನ
ಪಾವನ ಮೂರುತಿ ಕೋವಿದರೊಡೆಯ ೯

# ವ್ಯಾಸಕೂಟ–ದಾಸಕೂಟ ಮತ್ತು ಇತರ ಗುರುಗಳ ಸ್ತುತಿ

## ನಾರದರ ಸ್ತುತಿ

### ೭

ಇದೇ ಪೇಳಿ ಪೋದರು ವಿಧುವದನೆ
ನಮ್ಮ ಬುಧನುತ ಪದದ ನಾರದರು ಈ ಜಗದಿ ಬಂದು ಪ

ಸಿರಿ ಅರಸನೆ ಈ ಧರೆಯೊಳಗುತ್ತಮ
ಮರುತ ದೇವರೆ ಜಗದ್ಗುರುಗಳೆಂದು
ತರತಮ ಪಂಚಭೇದ ಜ್ಞಾನಶೀಲನೆ
ಸುರಲೋಕವಾಸಿ ಶ್ರೀ ಹರಿ ಪ್ರೇಮ ಪಾತ್ರನೆಂಬೊದೆ ಪೇಳಿ ೧

ಜರದೂರ ನರಹರಿ ಧರೆಯೊಳು ವ್ಯಾಪಿಸಿ
ಇರಲು ತ್ರಿಗುಣ ಕಾರ್ಯವಾಹವೆನ್ನುತಾ
ಪರತಂತ್ರ ಜೀವವೆಂದರಿದು ಪಾಪ ಪುಣ್ಯ
ಸರಸಿಜನಾಭನಿಗರ್ಪಿಸಿ ಒಟ್ಟಿಗೆ ಬರಬೇಕು ಯೆಂದು ೨

ಸಿರಿಗೋವಿಂದ ವಿಠಲ ವಿಶ್ವವ್ಯಾಪಕ
ಗಿರುವವು ಎರಡು ಪ್ರತಿಮೆ ಜಗದಿ
ಚರ ಅಚರಗಳನ್ನು ಅರಿತು ಮಾನಸದಲ್ಲಿ
ಹರಿ ಪೂಜೆ ಮಾಡಿ ಸೇರಿರಿ ವೈಕುಂಠವೆಂಬೊದೆ
ಪೇಳಿ ಪೋದರು ೩

### ೮

ಎಂದು ಕಾಂಬೆನೊ ರಾಘವೇಂದ್ರ ಗುರುಗಳನಾ ।
ಸುಂದರ ಕಾಯ ಆನಂದ ನಿಧಿಯು ಪ

ತಾಯಿಯಂದದಿ ನಮ್ಮ ಕಾಯುವ ಧಣಿಯಾ
ನ್ಯಾಯ ಸದ್ಗುಣ ಪೂರ್ಣ
ಮಾಯಿ ಜಗ ಹರಿಯಾ ೧

ಮಾಯಾ ರಮಣನ ನಾಮ ಗಾಯನ ಪರನ
ದಾಯಾದಿ ಕುಲವೈರಿ ಶ್ರೇಯ ಬಲಯುತನಾ ೨

ನರರೂಪ ಧರಿಸಿ ವಾನರ ಭಕ್ತವರನಾ
ನರಶೌರಿ ಪ್ರೀಯ ದೀನರ ಕಾಯುತಿಹರಾ ೩

ಜನರನ ಪೊರೆವನೆಂದೆನುತ ಭೂಮಿಯಲಿ
ಜನಿಸಿದ ತನ್ನವನ್ನ ವನುತಿ ಸಹಿತದಲಿ ೪

ದುರಿತ ವರೆಕೆ ತಾಮುರುತನಾಗಿಪ್ಪ
ಗುರುವೆಂಬ ಸಿರಿಗೆ ಇವ ನಿರಂತರದಿ ಸುರಪಾ ೫

ಭಕ್ತರ ಬಯಕೆ ಪೂರೈಪಾ ಸುರತರುವೇ
ಶಕ್ತ ವಿರಕ್ತ ಹರಿಭಕ್ತ ಮದ್ಗುರುವೆ ೬

ಭುವನದಿಂ ದಾಟಿಸೆ ನೌಕವಾಗಿಹಿನಾ
ನವ ಭಕುತಿಯನೀವ ಕುವಿಕುಲ ವರನಾ ೭

ದಿವಿಜೇಶನಂತೆ ಪೃಥ್ವಿಯೊಳು ಮೆರೆವಾ
ಇವನೇ ಗತಿಯೆನೆ ಜ್ಞಾನ ತವಕದಿ ಕೊಡುವಾ ೮

ನಿಂದಿಪ ಜನರಲ್ಲಿ ಪೊಂದಿಪ ಪ್ರೇಮ
ವಂದಿಪ ಜನರಿಗೆ ಸತತ ಶ್ರೀ ರಾಮ ೯

ಶ್ರೀನಿವಾಸ ಪುತ್ರ ಪರಮ ಪವಿತ್ರಾ.
ಜ್ಞಾನಿ ಜನರ ಮಿತ್ರ ವಿಹಿತ ಚರಿತ್ರಾ ೧೦

ನಷ್ಟ ತುಷ್ಟಿಗೆ ಅಂಜಾ ದುಷ್ಟ ಶೇರಾ
ಕಷ್ಟ ಕಳೆಯುವ ನಮ್ಮ ಕೃಷ್ಣ ಪಾರಿಜಾತ ೧೧

ಪೊಳಲುರಿ ಸಖನಾ ಘನಪೊಳಿಯುವ ಪಾದಯುಗವಾ
ಘಳಿಗಿ ಬಿಡದಲೆ ನೋಡುತ ನಲಿಯುತಿರುವಾ ೧೨

ಅರಿದು ಈತನೇಯನ್ನ ಗುರುವೆಂಬಗೆ ರುದ್ರಾ
ಧುರದೊಳು ಭೀಮ ಗುರುವಿಗತಾ ದಾರಿದ್ರ್ಯಾ ೧೩

ಅನಿಮಿತ್ತ ಬಂಧು ಬ್ರಾಹ್ಮಣ ವಂಶಜಾ
ಅನಘಾತ್ಮ ಹರಿಭಕ್ತ ಜನಕಾ ಭವ ತ್ರಾತಾ ೧೪

ತಪ್ಪು ನೋಡದಲೆ ಕಾಯುತಿಪ್ಪ ನಮ್ಮಪ್ಪ
ಸರ್ಪ ತಲ್ಪನ ಧ್ಯಾನದಿಪ್ಪ ನಿಪ್ಪ ೧೫

ಅರುಣಾಭಿ ಚರಣ ತಲೆಬೆರಳು ಪಂಕ್ತಿಗಳಾ
ಸರಸಿಜ ಪೋಲ್ವ ಮೃದುತರ ಪಾದಯುಗಳಾ ೧೬

ಇಳೆಯಾ ಸುರನತಿ ಪಾಪ ಕಳೆದ ಘನ
ವಲಿದ ಭಕ್ತರಿಗಿಷ್ಟ ಸಲಿಸುವ ಪಾದ ೧೭

ಸಕಲ ರೋಗವ ಕಳೆವ ಅಕಳಂಕ ಪಾದ
ನಿಖಿಲೈಶ್ವರ್ಯದ ಸುಖದಾಯಕ ಪಾದ ೧೮

ಹರಿಯಂತೆ ಹರನೊಲ್ ಸಾಸಿರ ನಯನನಂತೆ
ಶಿರಿಯಂತೆ ತೋರ್ಪ ಭಾಸ್ಕರ ನರನಂತೆ ೧೯

ಸುಳಿರೋಮಗಳುಳ್ಳ ಚಲುವ ಜಾನುಗಳಾ
ಎಳೆಬಾಳೆ ತೆರ ಊರು ಹೊಳೆವ ಸುಚೈಲ ೨೦

ತಟಿತ ಸನ್ನಿಭವಾದ ಕಟಿಗಿಪ್ಪ ಸೂತ್ರ
ನಟ ಶೇವಸಿವಲಿ ತಾನು ಪುಟಿಯು ಉದರಾ ೨೧

ಎದೆಯಲಿಪ್ಪುದು ನಮ್ಮ ಪರಮೇಶನ ಮನೆಯೊ
ವದಗಿ ಭಕ್ತರಿಗೆ ಕರುಣದಿ ಕಾಯ್ವ ಖಣಿಯೂ ೨೨

ಹುತವಾಹನನಂತೆ ಭಾರತೀಕಾಂತನಂತೆ
ಚತುರಾಶ್ಯ ಈ ಕ್ಷಿತಿಯಂತೆ ಇಹನಂತೆ ೨೩

ಹಸುವಿನಂದದಲಿ ಪಾಗಸನೊಳಿಹನ
ವಸುಧಿಯೊಳಿಂತಿದೊಮ್ಮೆ ಪಸುಯನಿಸಿದನಾ ೨೪

ಭೂಧರತನಂತೆ ವಸುಧರನಂತೆ
ಭೂಧರನಂತೆ ಸೋದರನಂತೆ ೨೫

ಚಂದನ ಚರ್ಚಿತ ಸುಂದರ ರೂಪ
ದಿಂದೊಪ್ಪುವ ಕಂಬು ಲೋಕ ಕಂಧರಾಯುತನ ೨೬

ಕರೆದು ಭಕ್ತರಿಗಿಷ್ಟಗರಿಯುವ ಚೆಲ್ವಾ
ವರ ರೇಖೆಯುತ ಶಿರಕರದಾ ವೈಭವನಾ ೨೭

ಮಂಗಳದಾಯಕ ಅಂಗೈಯಿಯುಗಳಾ
ಭಂಗಾರ ದುಂಗಾರ ಇಟ್ಟಿಪ ಬೆರಳು ೨೮

ಕೆಂದುಟಿ ಮೊದನಾಗಿ ಇಂದಿಪ್ಪ ವದನಾ
ಪೊಂದಿದ ದಂತಗಳಿಂದ ಸ್ವಾರಚನಾ ೨೯

ಹಸನಾದ ದೊಕರದಂತೆಸೆವ ಗಲ್ಲಗಳಾ
ಬಿಸಜದಂತೆ ರಾಜಿಸುವ ನೇತ್ರಗಳಾ ೩೦

ನಾಸಿಕದಲಿಪ್ಪ ಮೀಸಿ ದ್ವಂದ್ವಗಳಾ
ದೇಶಾದಿ ಪಾಲ್ಮೊರು ವಾಸಿ ಕರ್ಣಗಳಾ ೩೧

ಗಿಳಿಗೆ ವಾಚ್ಯಾಪದೊಳ ಹೊಳೆವಾ ಪುಚ್ಛಗಳಾ
ತಿಲಕಾ ಮುದ್ರೆ ಪುಂಡ್ರಗಳುವುಳ್ಳ ಫಾಲಾ ೩೨

ಹರಿಪಾದ ಜಲವನ್ನು ಧರಿಸಿದ ಶಿರವಾ
ಶಿರಿಗೋವಿಂದ ವಿಠಲನ್ನಡಿಗೆಯರಗುವಾ ಶಿರವಾ ೩೩

೬

ನಿತ್ಯದಿತಿಜರು ಕಲಿಗೆ ದೂರುತಿಹರೋ
ಸತ್ಯಧ್ಯಾನರ ಕಾಟ ತಾಳಲಾರೆವೊಯೆಂದು ಪ

ನೀ ಕಲಿಸಿದಾಟವನು ತಾ ಕಳೆದು ಜನರ ಅಘನೂಕಿ
ಜಗಸತ್ಯ ಶ್ರೀ ಹರಿಯು ಪರನು
ಶ್ರೀಕಮಲಭವರೆಲ್ಲ ದಾಸರೆಂದರುಪಲು
ತಾ ಕಲ್ಪಿಸಿದ ಪಾಠಶಾಲೆ ಸಭೆಗಳನೆಂದು ೧

ಭೂಸುರರಿಗನ್ನ ಧನ ಭೂಷಣಗಳಿತ್ತು
ಅಭ್ಯಾಸಗೈಸಿದ ಸಕಲ ವೇದಶಾಸ್ತ್ರ
ಏಸು ವಿಧ ಯತ್ನಗಳು ನಾ ಮಾಡಿದರು ಜಯ
ಲೇಸು ಕಾಣದೆ ನಿನ್ನ ಬಳಿಗೆ ಬಂದೆವು ಎಂದು ೨

ಇಂತು ತಾ ಮಾಡಿದನು ಪಿಂತಿನಾಶ್ರಮದಿ
ಈ ಗಂತು ನಮ್ಮವರಾದ ವದು ಮತ್ಸರಾ
ಕಂತು ಕೋಪಾದಿಗಳಿಗಂತಕನು ಯನಿಸಿ
ಮುನಿ ಸಂತತಿಪನಾಗಿರುವದೆಂತು ನೋಳ್ಪೆವು ಎಂದು ೩

ತಾಪಸೋತ್ತಮ ಸತ್ಯಧ್ಯಾನದಿಂ ಭೂತಳದಿ
ಪಾಪ ಸರಿದಿತು ಪುಣ್ಯವೆಗ್ಗಳಿಸಿತು
ಲೇಪಿಸದು ಖತಿಜನಕ ಇವರ ದಯದಿಂದೆಮ್ಮ
ವ್ಯಾಪಾರ ಧರೆಯೊಳಗೆ ಭೂಪ ಇನ್ಯಾಕೆಂದು ೪

ನಿರುತ ಸಿರಿಗೋವಿಂದ ವಿಠಲನ್ನ ಸೇವಿಸುತಾ
ಪರಹಿಂಸೆ ಧನಯುವತಿ ದ್ಯೂತತೊರದಾ
ವರಯತಿಯ ಮೋಹಿಸುವ ಶಕ್ತಿ ತನಗಿಲ್ಲೆಂದು
ಅರುಹಿದನು ಭೃತ್ಯರಿಗೆ ಕಲಿ ಮನನೊಂದು ೫

## ೧೦

ಇಷ್ಟು ಮಾಡಿ ಕೈ ಬಿಟ್ಟು ಕೂಡ್ರುವದು
ಶಿಷ್ಟರ ನಡತೆಲ್ಲೆಲ್ಲೂ ಗುರುವೇ ಬಲು
ಕಷ್ಟದೊಳಗೆ ನಾ ಮುಳುಗಿರುವೆ ನೀ
ಕೊಟ್ಟ ಅಭಯದಿಂ ಬದುಕಿರುವೆ
ಸಿಟ್ಟು ಮಾತ್ರ ನೀನಾಗ ಬೇಡ ಪೊರೆ
ಜಿಷ್ಣುಸಾರಥಿಯ ಪ್ರೀಯ ಮಗುವೆ ಬಾ ಬಾ ಗುರುವೆ ಪ

ನೀ ಮಾಡಿದ ಉಪಕಾರಕೆ ಪ್ರತಿ ನಭಭೂಮಿ
ಇತ್ತರು ಸರಿಯಿಲ್ಲ
ಈ ಮಾತು ಹೊರಗೆ ಪೇಳುವವಲ್ಲಾ
ನಾ ನಿದ್ದೆ ಪೂರ್ವದಲಿ ಅತಿ ಖುಲ್ಲಾ
ಶಿಲೆಯನು ಸುಂದರ ಮೂರ್ತಿಗೈದತೆರ
ಬಲು ವಿಧದಲಿ ಸಲಹಿದಿಯಲ್ಲ ಹರಿಬಲ್ಲಾ
ಜ್ಞಾನವಿತ್ತಿ ಹರಿಪಾದದಲ್ಲಿ ಅಭಿಮಾನವಿತ್ತಿ ಸುಖವೆಲ್ಲಾ
ಬಲುಹೇಯವೆಂದು ತಿಳಿಸಿದಿಯಲ್ಲಾ
ಮೇಲ್ವರದಿ ರಂಗನೊಲಿಯುವ ಸೊಲ್ಲಾ
ಅಸನ ವಸನಗಳು ಕೊಟ್ಟು ಕೊನೆಗೆ ತುಚ್ಛಿಸುವ ನಿನ್ನ

ಗುಣ ತಿಳಿಯಲಿಲ್ಲಾ ಇದು ಥರವಲ್ಲಾ
ನಿನ್ನ ಪಾದವೇ ಸಡಗರ ಸಿರಿ
ಮೇಲೆ ಸುರಪುರಿ ಜ್ಞಾನನಿಧಿ ಥೆರಿ
ಕಾಶಿ ಗಯಾ ಮಧುರಿ ಹರಿ ಓಂ ಓಂ ಓಂ
ನಿನ್ನ ನಾಮ ದುರಿತವೆಂಬೊ ಕರಿ
ಕುಲಕೆ ಘನ ಹರಿ
ಎಂದು ಈ ಪರಿ ತಿಳಿದೆನೆಲೊಧೊರಿ ಹರಿ ಓಂ ಓಂ ಓಂ
ಇನ್ನಾದರು ಕೋಪವತ್ವರಿ
ಕರುಣಿ ಕಣ್ತೆರಿ
ಸುತಗೆ ಸುಖಗರಿ
ತೋರೋ ನಿನ್ನ ಮಾರಿ ಹರಿ ಓಂ ಓಂ ಓಂ
ಎನ್ನಯ ಭಿಷ್ಟಗಳನ್ನು ನೀಡದಿರೆ
ನಿನ್ನ ವಿಮಲ ಕೀರ್ತಿಗೆ ಗುರುವೆ ಕುಂದನ್ನು ಬಿಡದೆ
ತಿಳಿ ನಾ ತರುವೆ
ಸಿಟ್ಟು ಮಾತ್ರ ನೀನಾಗ ಬೇಡ ಪೊರೆ ಜಿಷ್ಣು
ಸಾರಥಿಯ ಪ್ರಿಯ ಮಗುವೆ ಬಾ ಬಾ ಗುರುವೆ ೧

ಪಂಥವೇ ಹೇ ಮಹಾಕಾಂತಪ್ರಿಯ ನಿನ್ನ
ಸಂತತಿಯೊಳು ಸೂರಿಗಳೊಡೆಯ
ನೀನೆಂತು ಪೊಂದಿದ್ಯೆ ನಿರ್ಭಿಡಿಯಾ
ಇದು ಸಂತರು ಕೇಳಿದರಾಶ್ಚರ್ಯ
ವಂತರು ಆಗರೆ ಸಾಕು
ಮುಂದೆಯನ್ನಂತರಂಗವೇ ತವನಿಲಯ
ಆಗಲಿ ಜೀಯಾ
ಕಂದನ ಕಾಯುವದಂತು ಸಹಜ ಸಿರಿ
ಹಿಂದಕೆ ಪಾಂಡವನೆಂಭಿರಿಯಾ ಆ
ಗಂಧರ್ವನ ಮಗನಾದ ಗಯಾ ತಾ
ಬಂದು ಹೋಗಲವನನು ಮೊರೆಯ

ಸಿಂಧು ಜಪನ ಸಹ ಲಕ್ಷಿಸದಲೆ ತ್ವರ
ತಂದು ಕೊಟ್ಟನವನಿಗೆ ವಿಜಯಾ
ಮೇಲ್ದರಿಯದಯಾ
ಇದು ಅಲ್ಲದೆ ಬಹು ಭಕ್ತರು ಜ್ಞಾನಯುಕ್ತರು
ಸುಧಿಯ ಭೋಕ್ತರು
ಭವ ವಿಮುಕ್ತರು ಹರಿ ಓಂ ಓಂ ಓಂ
ನೆನೆದವರ ದು:ಖ ಬಿಡಿಸಿದರು
ಪಾಪ ಕೆಡಿಸಿದರು ಮತಿಯನಿಡಿಸಿದರು
ಸುಧೆಯ ಬಡಿಸಿದರು
ಹರಿ ಓಂ ಓಂ ಓಂ
ಬಲು ಹಿತದಿ ಶುಭವ ಕೋರಿದರು
ತಾಪ ಹೀರಿದರು
ವಾಕ್ಯ ಸಾರಿದರು
ಹರಿಯ ತೋರಿದರು ಹರಿ ಓಂ ಓಂ ಓಂ
ನೀನಾದರೂ ಬಹಳರ ಪೊರದಿ
ಈ ಹೀನ ಓರ್ವ ನಿನ್ನಗೆಯರವೆ ಮರಿಯಬ್ಯಾಡ ಕರುಣೆ
ನಾ ಕರವ ಮುಗಿವೆ ಸಿಟ್ಟು ಮಾತ್ರ ನೀನಾಗ ಬೇಡ ೨

'ಶಿರಿಗೋವಿಂದ ವಿಠಲ' ಪರ ಖರೆ ಆದರು
ಗುರುವಿಲ್ಲದ ಗತಿಯನ್ನು
ಧರೆತ್ರಯದಿ ತೋರು ತುಸು ನೋಡೋಣ ಗಿರಿಧರಿಯ ಬಿಟ್ಟು
ನಿಲ್ಲುವುದೇನು
ಗುರುವೆ ತ್ರಿಟಿಯ ಬಿಟ್ಬೊರುಷವಾಗುತದೆ ಹಿರಿಯರಿ ಪೇಳ
ವದಿನ್ನೇನು ಹೇ ।
ಸುರಧೇನು ಗುರುವೆ ಸುಖದ ಖಣಿ ಗುರುತನುಮಣಿ
ಗುರುವೆ ಮುಕುಟ ಮಣಿ ಸುಜನರಿಗೆ ಹೀಗೆಂದು
ತಿಳಿದೆ ನಾ ಮನದಾಗೆ
ಪರಕಿಸಿದೆನ್ನನು ಪೊರೆಯೆ ಯನುತ ಬಾ
ಯ್ತೆರೆಯುತ ಮಣಿಸುವೆ ಶಿರನಿನಗೆ ಮೂಜಗದಾಗೆ ।

ನಿನ್ನಿಂದ ಎನಗೆ ಸದ್ಬುದ್ಧಿ ಯೋಗದಾಸಿದ್ಧಿ
ಕಾರ್ಯದಾಸಿದ್ಧಿ ಸ್ವರ್ಗದಾಸಿದ್ಧಿ ಹರಿ ಓಂ ಓಂ ಓಂ
ನಿನ್ನಿಂದ ಪಡೆದ ವಿಜ್ಞಾನ ಹರಿಯರಾ ಖೂನಾ ಲೋಕದೊಳು
ಮಾನ ಮುಕ್ತಿ ಸೋಪಾನ ಹರಿ ಓಂ ಓಂ ಓಂ
ನೀನೇವೆ ಯನಗೆ ಆಭರಣ ಝುಗಝುಗಿಪ ವಸನ
ಶ್ರೀಹರಿಯ ಚರಣ ವಿರಜಾನದಿ ಸ್ನಾನ ಹರಿ ಓಂ ಓಂ ಓಂ
ನಿನ್ನೊಮ್ಮೆ ನೆನಸೆ ಪವಮಾನ ಕಾಯ್ವ ಪ್ರತಿದಿನ
ಇದಕೆ ಅನುಮಾನ ಇಲ್ಲ ಏನೇನ ಹರಿ ಓಂ ಓಂ ಓಂ
ಗಡ ಕೇಳ್ವಡೆಯನೆ
ಕಡೆ ನುಡಿಯನ್ನದು ಭಿಡೆಯ ಇಡದೆ
ನಾನುಡಿವೆ ಎನ್ನ ಮರೆತರೆ ಮಂಗನು ನೀ ನಿಜವೆ ೩

## ೧೧

ಏನೇನು ಭಯವಿಲ್ಲ ನಮಗೆ
ಪವಮಾನ ಸೇವಕ ಗುರು ರಘುಪತಿಯ ದಯವಿರೆ ಪ

ಜೋಡು ಕರ್ಮದಿ ಬಿದ್ದುಕೇಡು ಲಾಭಕೆ ಸಿಲ್ಕಿ
ಮಾಡಿದ್ದೆ ಮಾಡುತ ಮೂಢನಾಗಿ
ರೂಢಿವಳಗೆ ತಿರಿಗ್ಯಾಡುವ ಅಜ್ಞಾನಿ
ಕೋಡಗನ್ನ ಸಿಂಹ ಮಾಡಿದ ಗುರುವಿರೆ ೧

ಆವನು ದಯಮಾಡೆ ದೇವನು ವಲಿವನು
ಆವನ ನಂಬಲು ದೇವಗಣಾ
ಕಾವಲಿಗಳಾಗಿ ಕಾವದು ಅಂತ
ಕೋವಿದಾಗ್ರಣಿ ಗುರು ರಘುಪತಿ ದಯವಿರೆ ೨

ಕರವೆಂಬೊ ಲೇಖನದ್ವಾರದಿಂದ ನಮ್ಮ ಶಿರಿಗೋವಿಂದ ವಿಠಲ
ರಾಯನಾ ಕರಸಿ ಸುಹೃತ್ಸುಖ ಬೆರಸಿ ಪರಸ್ಪರ ಕರವಿಡಿದು
ತಿರುಗುವ ಗುರುಕೃಪೆ ನೆರಳಿರೆ ೩

## ೧೨

ಗುರುರಾಯ ಭವಹರ ಹರಿಪ್ರೀಯಾ ಪ

ಅಂಗಜ ಸಮಕಾಯಾ ರಂಗನಾಥನ ಪ್ರೀಯ
ಹಿಂಗಿಸೊ ಭವ ಭಯ ಅಂಗಜ ನಿಚಯಾ ೧

ನಮಿಸುವೆ ತವಪಾದ ವನಜಕೆ ನಾ ಸದಾ
ಅನಘ ಚರಿತನೇ ಬುಧಾ ವಿನಮಿತ ಕಾಮದಾ ೨

ಮಾನವ ಅರಿಶಿರಿ ಗೋವಿಂದ ವಿಠಲನ್ನ
ಪಾವನ ಪಾದದ ಸೇವೆನೀಯೊ ೩

## ೧೩

ಮಿಗೆ ಧನ್ಯ ನಾನಾದೆ ಜಗದ ವಳಗೆ
ಅಘ ಕಳಿವ ಗುರುಪಾದಯುಗಳ ಕಣ್ಣಲ್ಲಿ ಕಂಡು ಪ

ಮುಕುಟ ಮಂಡಿತ ದಿನಪ
ಪ್ರಕರ ಸನ್ನಿಭ ಶಿರದಿ
ಮಕರಂದ ಮಯವಾದ
ಶಿಖದ ಸೊಬಗು ಅಕಳಂಕಮಾದ ಫಾಲಕೆ
ವಪ್ಪುವ ತಿಲಕ ಭ್ರುಕುಟಿ ಮಧ್ಯದಿ ಪುಂಡ್ರ
ಸುಖದ ದ್ವಯದ್ರಿಕ ಕಂಡು ೧

ಹರಿನಾಮ ರವಿಯ ಕಂಡರಳುವೊ ಕರ್ಣಾಖ್ಯ
ಸರಸಿರುಗ್ವಗಳು ಚಿಂದ್ರ ತೆರ ಶೋಭಿಪಾ
ವರಕದಪಯುತ ವದನ ಕೊರಳು ಉರುಬಲದ ಭುಜ
ಕರ ಹೃದಯ ಎರಡು ಘನ ಗೆರೆಯು ಉದರವ ಕಂಡು ೨

ಧಿಟ ಕಟಿತ ಪಟರೋಮ ದಟಿತವಾಗಿಹ ಜಾನು
ಚಟುಲಶಿರಿ ಗೋವಿಂದ ವಿಠಲ ನಾಮ ಪರಿಸಿದಾಕ್ಷಣ

ನಟಿಸುವ ಪಾದದ ಕಠಿಣ ಸಂಸಾರ ಸಂಕಟ
ಕಳೆವ ರಜಕಂಡು ೩

## ೧೪

ಶ್ರೀಗುರು ಪದಕೆ ಬಿಡದೆ ರಾಗದಿ ನಮಿಪೆ ಪ

ಜಾಗುಮಾಡದೆ ಜವದಿ ಭವದ ರೋಗಗಳ
ಕಳಿಯುವಂಥ ಅ.ಪ

ಮಾನವರೂಪಾ ಮಹಾಜ್ಞಾನದ ಪಾಪಾ
ಕಾನನ ದಾವಾಗ್ನಿಎನಿಸಿ ದೀನಜನರ ಪೊರೆಯವಂಥ ೧

ಮಂಗಳ ಚರಿತಾ ಪಾಂಡುರಂಗನ ದೂತ
ತಿಂಗಳ ಸಮ ಕಾಂತಿವಂತ
ಡಿಂಗರಿಗರ ಪೊರೆಯುವಂಥ ೨

ನರಜಗಮಾವಾ ಲಕುಮಿಗೆ ವರನೆನಿಸುವಾ
ವರಶಿರಿ ಗೋವಿಂದ ವಿಠಲನ್ವರುಷದಿಂದ ಸ್ಮರಿಸುತಿರುವ ೩

## ೧೫

ಕೋಲು ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ
ಕೋಲು ಶ್ರೀಹರಿಯಾ ಬಲಗೊಂಬೆ ಕೋಲೆ ಪ

ಮೊದಲು ನಮ್ಮ ಗುರು ರಘುಪತಿಯ ಪಾದಕ್ಕೆ
ಮುದದಿಂದ ಎರಗಿ ಬಿನ್ನೈಪೆ ಕೋಲೆ
ಮುದದಿಂದ ಎರಗಿ ಬಿನ್ನೈಪೆ ಮನದಲ್ಲಿ
ಪದಮನಾಭನ್ನ ತೋರೆಂದು ಕೋಲೆ ೧

ಜನುಮ ಜನುಮದಲ್ಲಿ ಅನಿಮಿತ್ಯ ಬಂಧು
ನೀಯನಗೀಯೋ ನಮ್ಮ ಸೇವೆಯ ಕೋಲೆ

ಎನಾಗಿಯೋ ನಿಮ್ಮ ಸೇವೆಯ ತವ
ಪಾದವನು ಧ್ಯಾನ ಮರಿಯಾದೆ ಕೋಲೆ ೨

ಮೂಢನಾದ ಎನ್ನನೋಡಿ ಕರುಣವನು
ಮಾಡಿ ಹರಿಚರಣ ತೋರಿದ ಕೋಲೆ
ಮಾಡಿ ಹರಿಚರಣ ತೋರಿದ ನಿಮ್ಮ ದಯ
ಕೀಡುಂಟೆ ಜಗದಿ ಗುರುವರ್ಯ ಕೋಲೆ ೩

ಪತಿತನಾದವನಿಗೆ ಮತಿಯಿತ್ತು ಗುರು ಪ್ರಾಣ
ಪತಿಪಾದ ಮಹಿಮೆ ತೋರಿಸಿ ಕೋಲೆ
ಪತಿಪಾದ ಮಹಿಮಾ ತೋರಿಸಿ ಸ
ದ್ಗತಿ ಪಥವನ್ನು ವಿಡಿಸಿದ ಕರುಣಿಯೆ ಕೋಲೆ ೪

ಅನಾಥ ರಕ್ಷಕ ಆಪತ್ತು ಬಾಂಧವ
ಶ್ರೀನಿವಾಸನ್ನ ನಿಜದಾಸ ಕೋಲೆ
ಶ್ರೀನಿವಾಸನ್ನ ನಿಜದಾಸ ಮಮಕುಲ ಸ್ವಾಮಿಗೆ
ನಮಿಪೆ ಮನದಲ್ಲಿ ಕೋಲೆ ೫

ಲಕುಮೀಶ ಹರಿ ದೇವಕಿ ತನಯಗೆ
ಸಕಲಾ ಕರ್ಮಗಳಾ ಅರ್ಪಿಸೆ ಕೋಲೆ
ಸಕಲಾ ಕರ್ಮಗಳಾ ಅರ್ಪಿಪೆ ನಮ್ಮಗುರು
ಸುಖನಿಧಿಗಳಿಗೆ ನಮಿಸುವೆ ಕೋಲೆ ೬

ಆನಮಿಸುವೆ ಮಹಾನುಭಾವ ಗುರು
ನೇಮಕಲ್ಲಾರ್ಯರ ಚರಣಕ್ಕೆ ಕೋಲೆ
ನೇಮಕಲ್ಲಾರ್ಯರ ಚರಣಕ್ಕೆ ಕೋಸಗಿ
ಸ್ವಾಮಿರಾಚಾರ್ಯರ ಪಾದಕ್ಕೆ ಕೋಲೆ ೭

ಪುರಂದರಾದಿ ದಾಸವರ್ಯರ ಸುಂದರ ಚರಣಕ್ಕೆ
ಎರುಗುವೆ ಭರದಿಂದ ಕೋಲೆ

ಭರದಿಂದ ಮುದಮುನಿ ಇವರನ್ನು
ತೋರಿ ಪೊರೆಯಂದು ಕೋಲೆ 	೮

ಅಂದದಿಂದ ಆನಂದತೀರ್ಥ ರಾಘ
ವೇಂದ್ರಾದಿ ಸಕಲ ವಿಭುದಾದಿ ಕೋಲೆ
ರಾಘವೇಂದ್ರಾದಿ ಸಕಲ ವಿಭುದ ಆ ಕರ್ಮಂ
ದೀಗಳಿಗೆ ನಮಿಸುವೆ ಕೋಲೆ 	೯

ವಾದಿರಾಜರ ದಿವ್ಯ ಪಾದಕ್ಕೆ ನಮಿಸುವೆ
ಸಾಧಿಸಿ ಕೊಡಲಿ ಸತತಾದಿ ಕೋಲೆ
ಸಾಧಿಸಿ ಕೊಡಲಿ ಸತತಾದಿ ಹರಿದಾಸ
ರಾದವರ ಸೇವೆಯನಗೆಂದು ಕೋಲೆ 	೧೦

ಗಣಪಾದಿಗಳು ಸುರಮುನಿ ಪಾದಗಳಿಗಾ
ನಮಿಸುವೆ ಮನಸಿಜ ಸುರಪಾಗ ಕೋಲೆ
ನಮಿಸುವೆ ಮನಸಿಜ ಸುರಪಾಗ ಭೂತ
ಗಣಪತಿ ಶೇಷರಪಾದ ಕಮಲಕ್ಕೆ ಕೋಲೆ 	೧೧

ಭಾರತೀವಾಣಿ ಗುರು ಮಾರುತಿ ಪಾದಕೆ
ಸಾರುತ ಈ ಪರಿ ಮಣಿಯುವೆ ಕೋಲೆ
ಸಾರುತ ಈ ಪರಿ ಮಣಿಯುತ ಹರಿಪಾದ
ತೋರುತ ಮನದಲ್ಲಿ ನಿಲಿಸೆಂದು ಕೋಲೆ 	೧೨

ಲಕ್ಷ್ಮೀದೇವಿಯೆ ಲಕ್ಷಣವಂತಿಯೆ
ಪಕ್ಷಿವಾಹನನ ಅರ್ಧಾಂಗಿ ಕೋಲೆ
ಪಕ್ಷಿವಾಹನನ ಅರ್ಧಾಂಗಿ ಭವದಿಂದ
ರಕ್ಷಿಸಲೆನ್ನ ತವಕಾದಿ ಕೋಲೆ 	೧೩

ಶಿರಿಗೋವಿಂದವಿಠಲ ವಿಶ್ವವ್ಯಾಪಕ
ಮರುತಾಂತರ್ಗತನೆ ಮುರರಿಪು ನಮ್ಮ
ಗುರುವರ್ಯರ ಪ್ರೀಯ ಸಲಹಯ್ಯ ಕೋಲೆ 	೧೪

## ಆತ್ಮನಿವೇದನೆ

### ೧೬

ಆತನೆಯನ್ನ ತಾತನು
ರಘುನಾಥನಾಗಿ ತ್ರೇತಾಯುಗದಲಿ
ಮೆರೆದಾತನೆಯನ್ನ ತಾತನು ಪ

ತಂದಿನ ಅಗಲಿದ ಕಂದ ಕಾನನದೊಳು
ಬಂದು ಅಂಗುಟ ಊರಿನಿಂದುತ್ತರಾ
ಇಂದಿರೇಶ ಭವಬಂಧ ಮೋಚಕ ಪೊರೆಯೆಂದೆನೆ
ಧೃವನಿಗೆ ಚಿರಪದವಿ ಕೊಟ್ಟಾತನೆಯನ್ನ ತಾತನು ೧

ದುರುಳತನಪರಿಹರಿಸ ಬೇಕೆನೆ
ನರನರಸಿ ದ್ರೌಪದಿ ಮಾನವ ಪರಮಕರುಣಿ
ಮುರಹರನೆ ತಡಿಯದಲೆ ಪೊರೆಯನೆ
ತರುಣಿಯ ಮೊರೆ ಕೇಳಿದಂಥಾತನೆ ೨

ಶಿರಿಗೋವಿಂದ ವಿಠಲ ವೇದ ವಂದಿತ
ಧರಣಿಜ ಪತಿ ಹರಿಪರನೆನ್ನುತ
ಪರಮ ಭಕುತಿಯಿಂದ ಸ್ಮರಿಸುವವರ
ಕರಪಿಡಿಯಲೋಸುಗ ತನ್ನ ಕರಚಾಚಿಕೊಂಡು ನಿಂತಾತನೆ ೩

### ೧೭

ಉದಕಜಕಾರ್ಕನು ಉದಯಿಸಿದಂತೆ
ಮಧುರಿಪು ನೀ ಬಂದೊದಗಿದೆ ಸಲಹೈ ಪ

ಗಾದೇಯ ನಾಮಕ ಗಾದೆ ಪ್ರಭುವೆ ಖಳಾ
ಭಾದೆ ಬಿಡಿಸೊ ಖಲ । ಪರಮಾದರದಿ ಪ್ರಹ್ಲಾದನ ಪೋಷಿಪ ೧

ಮನೆ ಧನ ಬಿಟ್ಟು ನಿಮ್ಮನು ಭಜಿಸುವ ನಮ್ಮನು
ಬಾಧಿಪ ಖಳನನು ಶಿಕ್ಷಿಸು ಹೇ ವನಜನಯನ ಹರಿ ೨

ಆವನು ನಿನ್ನುಳಿದೀ ವಸುಧರೆಯೋಳು
ಜೀವರ ಸಲಹುವ ದೇವದೇವ ಶಿರಿಗೋವಿಂದ ವಿಠಲ ೩

## ೧೮

ಕರುಣಾದಿ ಪಿಡಿ ಕರವಾ ದೇವರ ದೇವ ಪ

ಕರುಣಾದಿ ಪಿಡಿಕರ ಸರಸಿಜಾಂಬಕ ಎನ್ನ
ಗುರು ರಘುಪತಿ ಪಾಲಾ ಮರುತಾಂತರಿಯಾಮಿ ಅ.ಪ

ಗತಶೋಕ ಜಿತಮಾಯ
ಪತಿತ ಪಾವನವೇದ್ಯ
ಪ್ರತಿಪಾದ್ಯ ಕ್ಷಿತಿಪ ಭಾರತಿ ಕಾಂತ ವಂದ್ಯಾ ಆ
ನತರ ಪಾಲಕ ದುಷ್ಟದಿತಿಜಾರಿ ತವಪಾದ
ಶತಪತ್ರ ಬಿಡದೆ ಸಂತತ ಭಕುತಿಯಲಿಂದ
ಸ್ತುತಿಪಾರ ಮಿತ ಅಘವಾ
ಕಳೆದು ಮತ್ತೆ ಹಿತದಿ ಸದ್ಗತಿ ಕೊಡುವಾ
ನಿನ್ನಯ ದಿವ್ಯಾಚ್ಯುತವಾದ ಘನದಯವಾ ಪೊಗಳು
ವಂಥ ಮತಿವಂತರನು ಕಾಣೆ ಶತಮುಖಜಜ ಮಾವಾ ೧

ಅನಿಮಿತ್ಯ ಬಂಧುವೆ ವನಚಾರಿ ಕೂರ್ಮನೆ
ಕನಕ ನೇತ್ರಾರಿ ಪಾವನತರ ನರ ಪಂಚ
ನಾನಾ ರೂಪದಿಂದ ಬಾಲನಾ ಕಾಯ್ದೊನರ ಹರಿಬಲಿ
ಯನು ಪಾದದಿಂದ ತುಳದು ನಿತ್ಯ ಅನಘಾತ್ಮ
ಜನನೀಯ ಕೊಂದಾನೆ ಜನಕ ಜಾಪತಿಯ ರು
ಕ್ಮಿಣಿ ಮನೋಹರನೆ ವಸನದೂರ ಹಯರೂಢ

ಜನನ ರಹಿತ ವಿಖ್ಯಾತಾ
ನಮಿಸುವೆ ಅನಿಮಿಷಪಜನ ಸುತಾ ಬೇಡಿಕೊಂಬೆ
ಅನುದಿನದಲಿ ಮಮತಾ
ಎನ್ನೊಳಗಿಟ್ಟು ಕ್ಷಣ ಬಿಡದಲೆ ಕಾಯೊ
ಕನಕೋದರನ ತಾತಾ ೨

ಸರಿವೀರ ಹಿತ ಬಲಿಸರಸಿ ಜಾಂಬಕ ಮುರ
ಹರ ಹರ ವಂದಿತ ಹರಿಮುಖ ಹರಿನುತ
ಹರಿಸುರ ಪ್ರೀತಿ ಪಾದ್ಯ ಹರಸು ಎನ್ನಯ ಅಘ
ನಿರುತ ನಿನ್ನ ಡಿಂಗರರ ನೀಕರದಿತ್ತು
ಗುರುವಿನ ಚರಣಾದಿ ಸ್ಥಿರ ಭಕುತಿಯ ಕೊಟ್ಟು
ವರ ಶಿರಿಗೋವಿಂದ ವಿಠಲನೆ ನೀ ಯನ್ನ
ಮರಿಯದೆ ಮಮತೆಯಿಂದಾ
ಪಾಲಿಸು ನಿತ್ಯ ಗರಿಯುತಲಿರು ಆನಂದಾ
ನಿನ್ನಯ ಪಾದಾದಿರಲಿ ಮನಸು ಮುಕುಂದಾ
ಬೇಡಿಕೊಂಬೆ ಭರದಿಂದ ಬಿಡಿಸೊ ಈ ದುರುಳ
ಭವದ ಬಂಧ ೩

## ೧೯

ಕಳೆಯ ಬ್ಯಾಡ ಮನವೇ ದಿನಾ ಕಳೆಯ ಬ್ಯಾಡ ಪ

ಹನುಮ ವಿನುತ ಪದವನುಜ ಮರೆತು ದಿನ ಅ.ಪ

ಆರನು ನಂಬಿದರಾರು ಕಾಯುವರು
ಧೀರ ದೇವಕಿಯ ಸುಕುಮಾರ ನುಳಿದು ದಿನ ೧

ಯತಿಕುಲಪತಿ ಸುಖತೀರ್ಥರ ಮತ ರತುನದ
ಕ್ಷಿತಿಗೆ ಪಾರ್ಥಸಾರಥಿಯ ನುಳಿದು ೨

ನಂದದ ಶಿರಿಗೋವಿಂದ ವಿಠಲ
ರಾಘವೇಂದ್ರ ವಿನುತ ದ್ವಂದ್ವನುಳಿದು ದಿನ ೩

## ೨೦

ಕೇಳುವದರೊಳಗೆ ಕಳದಿಯಲ್ಲ ದಿನ ಮಾಡುವ-
ದೆಂದ್ಹೇಳಲೆ ಮನವೆ ಪ

ಮನನ ಮಾಡಿ ಮಾಧವನ ಮಹಿಮೆ
ಅನುಭವಕೆ ತಾರದೆ ಈ ಪರಿಯಲಿ ಬರೆ ಅ.ಪ

ಪರರ ಹರಟೆಗೆ ಪರವಶನಾಗುತ ನಿರುತ ಈ
ಪರಿ ಕಾಲ ಕಳೆವೆ
ಮರಳಿ ಹರಿಸ್ಮರಿಸರೆಂದು ಡಂಗುರ ಹೊಯ್ಯುವ
ಗುರುಹಿರಿಯರ ನುಡಿಗಳು ೧

ಹೆಣ್ಣು ಮಣ್ಣು ಹಣವನ್ನು ನಂಬಿ ನೀನು
ಕೆಡದಿರೆಲೊಯಂದೆನುತ
ಚನ್ನಾಗಿ ಸರ್ವತ್ರ ಕೇಳಿ ನೀ ಮುನ್ನಿನಂತೆ
ಆಚರಿಸುತಿರುವಿಯಾ ೨

ಜ್ಞಾನವಿಟ್ಟು ಪವಮಾನ ವಂದಿತನ
ಗಾನಮಾಡು ಶ್ರೀಹರಿಗುಣವಾ
ಮಾನದ ಸಿರಿ ಗೋವಿಂದವಿಠಲಗೆ ಹೀನ
ಲೇಸುಗಳ ಅರ್ಪಿಸು ಮರೆಯದೆ ೩

## ೨೧

ಚೇತರಿಸಾಲೊಲ್ಲೆಯಾ ಮನಪಾತಕ ನಿದ್ರೆ ಭರದಿಂ ಪ

ಮಲಮಯ ಕಾಯದಾ ಹೊಲಸು ಹಸಿವಿತ್ರಿಷಿ
ಛಲಮದ ರೋಗಗಳಾ
ಕುಲಗೆಡಿಸುವ ಆಶಾದಿಗಳಳಿಯದೆ
ಮಲಗುವರೆ ಮಹನೀಯರ ತೆರದಿ ೧

ದಾರಾತನು ಬಲಹೀರುತ ಮಾಯವ
ಬೀರುತಲಾತ್ಮಜರು ದಾರಿದ್ರ್ಯದ ದಾವಾನಳ ಸುಡುತಿರೆ
ನಾರದರೋಲ್ ನಿಶ್ಚಿಂತನಾಗಿ ೨

ಶಿರಿಗೋವಿಂದ ವಿಠಲ ಮೊರೆ ಪೊಕ್ಕರೆ
ಪೊರೆಯುವನೆಂದು ಅಭಯಾ
ವರಭುಜಗಳು ನಾಭಾಯತ್ತಿನಿಂದಿರಲು
ಸುರ ಅರಿಗಳ ತೆರೆ ಹೊರಳೂರಗದಾ ೩

## ೨೨

ನೆನಿ ಮನ ಅನುದಿನದಿ ಅನಮಾನಿಸದೆ ನೀ ಪ

ನೆನಿಮನ ಶ್ರೀ ಸತ್ಯಜ್ಞಾನರ ಅನಘಹೃದ್ವನಜದಲಿ
ಘನ ದಿನ ಮಣಿಯವ್ಪೊಲ್ ಮಿನುಗುವನ
ಗುಣ ಗಣ ತನು ಮರೆದು ಕುಣಿಕುಣಿದು ಹರುಷದಿ ಅ.ಪ

ಜ್ಞಾನಾತ್ಮ ಪರನೆಂದು ಮಿಕ್ಕಾದದಿತಿಯರು
ಊನರು ಹರಿಗೆಂದು
ಚೇತನರ ಅವನಾಧೀನರು ಅಹುದೆಂದು
ವಿಸ್ತರಿಸಿ ಪೇಳಿದ ದಿನಪಾಲಕದೇವ ಶ್ರೀ
ಪವಮಾನ ಮತ ಅಂಬುಧಿಯೊಳನುದಿನ
ಮೀನನೆನಿಸಿದ ನಮ್ಮ ಸತ್ಯಜ್ಞಾನ
ತೀರ್ಥರ ಮಾನದಂಘ್ರೀಯ ೧

ಕಮಲಾಪ್ತಗಧೀಕವಾದ ತೇಜದಲಿ ಪೊಳೆಯುವ
ಕಮಲಾಪತಿಯ ಸುಪಾದಾ ಅತಿ ವಿಮಲತನ
ಹೃತ್ಕಮಲದೊಳಿಟ್ಟು ಸದಾ ಭಯಹಾರಿ ಕರದ್ವಯ
ಕಮಲದಿಂ ಸೇವಿಸುತ ಮೈಮುಖ

ಕಮಲಚಂದಿರನೆನಿಸಿ ಸಜ್ಜನ ಕಮಲದ ಮಹಿಮೆಯ
ತೋರ್ದ ಗುರುತಮ ಕಮಲ ಸಂಭವ ಪಿತನ ಪೂತನ ೨

ಇಂದ್ರ ಲೋಕವ ತೊರೆದು ಕೆಲಕಾಲ ತಾರ
ಕೇಂದ್ರನೊಳು ಭುವಿಗಿಳಿದು ಸಜ್ಜನರ ಪೊರೆವದ
ಕಿಂದ್ರಿಯಂಗಳ ಗೆಲಿದು ಸನ್ಯಾಸ ಕೊಂಡು
ಇಂದ್ರ ಹರಿಹರ ಶೀತ ರಘುಕುಲ ಇಂದ್ರನಾವ ಉ
ಪೇಂದ್ರ ಶಿರಿಗೋವಿಂದ ವಿಠಲನ ಭಜಿಸಿ ರಾಜ ಮ
ಹೇಂದ್ರಿಯ ತನುವಿಟ್ಟ ಗುರುಪದ ೩

## ೨೩

ಬಾಯೆಂದು ಕರೆವೆನೊ ದೇವನಿನ್ನ
ಮಾಯಿ ವೈರಿ ಮಧ್ವರಾಯರ ಪ್ರೀಯನೆ. ಪ

ರಾಮ ನಿರಾಮಯ ಮಾಮನೋಹರ ಶೌರಿ
ಸೋಮಧತಾರ್ಚಿತ ಸಾಮನುತಾ ಭೂಮಿಜ
ಲೋಲಬಾರೊ ಸಾಮಜ ಪಾಲ ಬಾರೊ
ಕಾಮಿತ ಶೀಲ ಬಾರೊ ತಾಮಸ ಕಾಲ ಪ್ರೇಮದಿ ೧

ಬಿಸಿಜಾಭಾಸ್ವಜನ ಮಾನಸಗೆ ಅಸುರ ವೈರಿ
ಕುಸಮಶರ ಪಿತ ಸುಮನಸ ವಂದಿತಾ
ಅಸಮ ಶೂರ ಬಾರೊ ವಸುಧಿಧರ ಬಾರೊ
ವ್ಯಸನ ಹರ ಬಾರೊ ಅಸುರ ವೈರಿ ಕುಶಲದಿ ೨

ನಂದನ ಕಂದನೆ ಇಂದಿರೆ ಮಂದಿರ
ಸುಂದರ ಶಿರಿಗೋವಿಂದ ವಿಠಲ
ಮಂದರಧರ ಬಾರೋ ಚಂದಿರ ಮೊಗ ಬಾರೊ
ಭಂದದ. ದೈವ ಬಾರೊ ಇಂದಿನ ಯನ್ನ ಮನಸಿಗೆ ೩

## ೨೪

ಬಿಡುಮನ ಭವಾಖ್ಯ ಉರಗದ ಸಂಗ
ತಿಳಿ ಮಡಿದು ಪೋಪುದೀ ಅಂಗ ಪ

ಅಚ್ಯುತನಾಮನುಚ್ಚರಿಸದವನ
ಕಚ್ಚದೇ ಬಿಡದೀ ಭುಜಂಗ ೧

ವಿಷಮಯ ವಿಷಯಕೆ
ವಶನಾಗದೆ ಬಲು ವಸುಧೆಯೊಳು ನಿಸ್ಸಂಗಾ ೨

ಸಿರಿಗೋವಿಂದ ವಿಠಲನ ಸ್ಮರಿಸೆ ಹರಿ
ಪೊರೆವ ತ್ವರ ದಯಾಪಾಂಗ ೩

## ೨೫

ಭಕುತರಿಗಾಗಿ ನೀ ಬಡುವ ಕಷ್ಟಗಳು
ಅಕಟ ಪೇಳಲಳವೆ ( ನೋಡಲಳವೆ)
ಲಕುಮಿ ಪತಿಯೆ ಯಾತಕೆ ವೃಥಾನಿಕರಕೆ ಸುಖವೀವೆ ಕಾವೆ ಪ

ಮಂದಿಮನ ವಲಿಸಿ ಮದುವೆ ನೀನು ಮ
ತ್ತೊಂದು ಮಾಡಿಕೊಳುತ್ತಾ
ಅಂದಣಾದಿ ಐಶ್ವರ್ಯವನ್ನು ಪರರಿಂದ ಕೇಳಿಕೊಳುತ್ತಾ
ನಿಂದೆ ಮಾಡುವರೆಂಬೊ ಭಯದಿ
ಅವರ್ದಿಂದೆ ಹಿಂದೆ ಇರುತ್ತಾ
ಅಂದವಾದ ಆಟಗಳೊಳಗೆ ಇದುವಂದು ಎನುತ್ತಾದೇವ ೧

ಸಡಗರದಲಿ ಕರಪಿಡಿದು ಕಾಯ್ದೆ ನೀ
ಹುಡುಗರೀರ್ವರನ್ನು
ಮಡುವಿನೊಳಗೆ ಆ ಮಕರಿಯಿಂದ ಕಾಲ್ಪಿಡಿಸಿಕೊಂಡವನ್ನ

ಮಡದಿಗಂತು ಗಡಿತಡಿಯದೆ
ನೀಡಿದಿ ಉಡುಗೆ ಅಗಣಿತವನ್ನು
ಕಡಿಗೆ ನಿನ್ನ ಕರದೊಂದು ದಿನಾದರು
ಬಡಿಶ್ಯಾರೆ ಸುಖವನ್ನು ಏನು ೨

ಏನು ತಪ್ಪು ನಿನ್ನವರು ಮಾಡಿದರು ಕಾಣಬಾರವು ನಿನಗೆ
ಸೂನು ವೈರಿ ಪರಪ್ರಾಣಹಾರಿಗಳ ಪೊರೆದು ಕರುಣಿ
ನಿನಗೆ ಅನುವಂದು ಪಂಚಿಕೆ ಪೇಳುವೆ
ಸುರಧೇನು ಬಾರೊ ಬ್ಯಾಗ
ಮಾನದ ಶಿರಿಗೋವಿಂದ ವಿಠಲ ಎನ್ನ
ಮಾನಸ ಮಂದಿರಕೆ ಈಗ ೩

## ಲೋಕನೀತಿ

### ೨೬

ಕೇಶವನ ದಾಸರಿಗೆ ಘಾಸಿಯುಂಟೆ
ವಾಸವನ ವಜ್ರಕೆ ಗಿರಿನಿಕರದಂಜಿಕಯೆ ಪ

ಇದ್ದಲಿಯನು ಗೊರಲಿ ಮೆದ್ದು ಜೀವಿಪದುಂಟೆ
ಮದ್ದಾನೆಗಳಿ ಗಲ್ಪ ನರಿಯ ಭಯವೇ
ಅಬ್ದಗಳು ಮರುತನೊಳು ಯುದ್ಧ ಬಯಸುವದುಂಟೆ
ಸಿದ್ಧರಿಗೆ ಭವಪಾಶ ಪದ್ಧತಿಯು ಉಂಟೆ ೧

ಗುರುಕೃಪೆಯ ಪಡೆದವಗೆ ಪರಸೌಖ್ಯ ತಪ್ಪದೇ
ಹರಿಯ ಸ್ಮರಿಸುವ ನರಗೆ ನರಕ ಭಯವೇ
ಸರಿಗಟ್ಟಿ ಉರಗ ನಭಚರನೆದುರಲ್ಲಿಪ್ಪದೆ
ನರಚಂಡಕರಕರ ಕಂಡು ಅರುಳುವುದೆ ಕುರುಕುಮುದಾ ೨

ಮೇರುವಿಗೆ ಛಳಿ ಭಯವೇ
ವಾರಿಧಿಗೆ ಮಳಿ ಭಯವೇ
ಮಾರನ್ನ ಗೆದ್ದವಗೆ ನಾರಿ ಭಯವೇ
ತಾರಕಾ ಪ್ರೀಯ ಶಿರಿಗೋವಿಂದವಿಠಲಗೆ
ಸೇರಿರುವ ಶೂರರಿಗೆ ಆವ ಭಯವ್ಯೆಯ್ಯಾ ೩

### ೨೭

ದೋಷ ಬಪ್ಪದೆ ಇಪ್ಪದೆ ಪಾಮರನಿಗೆ ಪ

ಜಲಜನಾಭನ ಮರೆತು ಜಲದಲ್ಲಿ ಮಿಂದು ಹೆ
ಬ್ಬುಲಿ ಬಣ್ಣದಂತೆ ನಾಮಗಳ ಧರಿಸಲೇನು ೧

ಸನಕಾದಿ ಮುನಿವಂದ್ಯ ಮನಸಿಜ ಜನಕಾ
ನಮ್ಮನನು ಕಾಯುತಿರೆ ಭೂಮಿಧನವೇ ಜೀವನನೆಂಬುವಗೆ ೨

ಶಿರಿಗೋವಿಂದ ವಿಠಲನ ಸಂಸ್ತುತಿಸುವ
ಹರಿದಾಸನ ತಿರಸ್ಕರಿಸುವ ದುರುಳಗೆ ೩

## ತಾತ್ವಿಕ ಹಿನ್ನೆಲೆ

### ೨೮

ಮೋದಭರಿತ ಕೇಶವನೆ ಈ ಜಗಕಾದಿ
ಕರ್ತನೆಂಬೋದು ಖರೆ
ಸಾಧಿಸಿಕೊಂಬುವ ವಿಬುಧರ ಕೈವಶ
ನಾಗುತಿಪ್ಪನೆಂಬೋದು ಖರೆ ಪ

ಪೊಡವಿಯೊಳಗೆ ನಾರಾಯಣ ತಾನು ಬಿಡದೆ
ಇಪ್ಪನೆಂಬೋದು ಖರೆ
ಮೃಡನುತನಿಗೆ ಮನೆ ಸಕಲವಾದ ಈ
ಜಡಜಂಗಮವೆಂಬೋದು ಖರೆ ೧

ಅಘದೂರನ ಮಹ ಉದರದೊಳಗೆ ಈ
ಜಗವು ಇಪ್ಪದೆಂಬೋದು ಖರೆ
ಖಗನಗ ಮೃಗ ಸರ್ವಗನಿಗೆ ಎಂದಿಗು ವಿಗಡವಿಲ್ಲ
ವೆಂಬೋದು ಖರೆ ೨

ಉಂಬುವಲ್ಲಿ ಉಡುವಲ್ಲಿ ನಮ್ಮ ಹರಿ
ಇಂಬಾಗಿಹನೆಂಬೋದು ಖರೆ
ಕೊಂಬುವಲ್ಲಿ ಕೊಡುವಲ್ಲಿ ಸರ್ವರಲ್ಲಿ ತುಂಬಿ
ಇಪ್ಪನೆಂಬೋದು ಖರೆ ೩

ಎಲ್ಲೆಲ್ಲುಡುಕಲು ಇಲ್ಲ ನಮ್ಮ ಹರಿ ಇಲ್ಲದ
ಸ್ಥಳ ಇಲ್ಲೆಂಬೋದು ಖರೆ
ಬಲ್ಲಿದರಿಗೆ ಪ್ರತಿಮಲ್ಲ ಈತಗೆಣೆ ಇಲ್ಲೇ
ಇಲ್ಲವೆಂಬೋದು ಖರೆ ೪

ವಾನರ ವಂದಿತ ಶ್ರೀನಿವಾಸನಿಗೆ ಹೀನತೆ
ಇಲ್ಲೆಂಬೋದು ಖರೆ
ಶ್ರೀನಿಧಿ ಪರನೆಂದ್ಪೊಗಳುವಲ್ಲಿ ಅನುಮಾನ
ವಿಲ್ಲವೆಂಬೋದುಖರೆ ೫

ವೇದತಂದು ವೇದನಿಗಿತ್ತಾತನೆ ಭೂಧರನೆಂಬೋದು ಖರೆ
ಮೋದದಿ ಬೇರನು ಮೆದ್ದು ಕ್ರೂರ ವಟುವಾದನು
ಈತನೆಂಬೋದು ಖರೆ ೬

ಪರಶುಧಾರಿ ರಘುರಾಮ ಕೃಷ್ಣವರ
ಬದ್ಧರೂಪನೆಂಬೋದು ಖರೆ
ತುರಗ ರೂಢ ಬಹುರೂಪನಾಗುವುದು
ಧರೆಯೊಳು ನಿಜವೆಂಬೋದು ಖರೆ ೭

ಸುಷ್ತಿ ಸ್ವಪ್ನ ಜಾಗ್ರತಿಗಳು ಜೀವಕೆ ಕ್ಲಿಪ್ತ
ಮಾಳ್ಪನೆಂಬೋದು ಖರೆ
ಆಪ್ತನಾಗಿ ಎಡೆಬಿಡದೆ ಸರ್ವರಲಿ
ವ್ಯಾಪಿಸಿರುವನೆಂಬೋದು ಖರೆ ೮

ಜನನ ಮರಣಗಳು ಜೈಸಿದವನು ರಾಮನು
ಎನಿಸಿದನೆಂಬೋದು ಖರೆ
ಗುಣದೂರನು ಆ ದನುಜವರಿಯ ರಾವಣನ
ಕೊಂದನೆಂಬೋದು ಖರೆ ೯

ದನುಜರೊಂದಿಗೆ ದ್ವೇಷ ಮಾಡಿ ಸುಮನಸರ
ಪೊರೆವನೆಂಬೋದು ಖರೆ
ಇನಿತು ಲೀಲೆ ತೋರಲು ಅವನಿಗೆ ಕಾರಣವೆ
ಇಲ್ಲೆಂಬೋದು ಖರೆ ೧೦

ನಿಗಮಗಳೆಲ್ಲವು ಈತನ ಗುಣಗಳ ಪೊಗಳು
ತಲಿಹ ವೆಂಬೋದು ಖರೆ
ಅಗಣಿತ ಮಹಿಮನ ನಾಮವೆ ಸ್ಮೃತಿವರ್ಣಗಳು
ಸ್ವರಗಳೆಂಬೋದು ಖರೆ ೧೧

ಅತಿವಿಮಲನಿಗಿವರೆನಿಪರಹಿತದಲಿ ಪ್ರತಿಬಿಂಬರು
ಯಂಬೋದು ಖರೆ
ಚತುರಾನನ ಭಾರತಿಧವ ಭವ ಶಚಿ ಪತಿಗಳು
ನಿಜವೆಂಬೋದು ಖರೆ ೧೨

ಸಾಸಿರನಾಮಗೆ ವಾಸವಾದಿಗಳು ಕೂಸುಗಳ
ಹುದೆಂಬೋದು ಖರೆ
ಸೋಸಿಲಿಂದ ಅರ್ಧಾಂಗಿ ಆದಳು ಶ್ರೀ
ಸತಿನಿಜವೆಂಬೋದು ಖರೆ ೧೩

ಅಚ್ಯುತನಿಗೆ ನಮ್ಮ ಗುರುವರ ಮಾರುತಿ ಚೊಚ್ಚಿಲ
ಮಗನೆಂಬೋದು ಖರೆ
ಹೆಚ್ಚಿನ ಭಕುತರು ಇಲ್ಲ ವಿಧಿಹೊರತು ನಿಶ್ಚಯ
ನಿಜವೆಂಬೋದು ಖರೆ ೧೪

ಈತನು ಪೇಳಿದ ಮಾತುಗಳನು ಹರಿ ಕೂತು
ಕೇಳ್ವನೆಂಬೋದು ಖರೆ
ಈತನ ನಂಬಿದ ಜನರ ಕಂಡು ಅತಿ
ಪ್ರೀತನಾಗ್ವನೆಂಬೋದು ಖರೆ ೧೫

ಮುದಮುನಿಯಾಗಿ ಹನುಮನು ಈ ಜಗದೊಳಗುದಿಸಿ
ಬಂದನೆಂಬೋದು ಖರೆ
ಬುಧವರ ಪುರಂದರದಾಸರಾಗಿ ನಾರದ
ನೆಂದರೆಂಬೋದು ಖರೆ ೧೬

ಮಧ್ವಮತವೇ ಮೂಜಗದೊಳ್
ಪರಿಶುದ್ಧವಾದುದೆಂಬೋದು ಖರೆ
ಅದ್ವೈತರನೆಲ್ಲ ಗೆದ್ದು ಪರಮ ಪ್ರಸಿದ್ಧ
ವಾದುದೆಂಬೋದು ಖರೆ ೧೭

ಹರಿನಾಮಕೆ ಹರಿಯದ ಪಾಪಿಗಳೀಧರೆಯೊಳಿ–
ಲ್ಲವೆಂಬೋದು ಖರೆ
ಹರಿಸ್ಮರಣೆಗೆ ಸರಿಯಾದ ಪುಣ್ಯ ಮತ್ತರಸಲಿಲ್ಲ
ವೆಂಬೋದು ಖರೆ ೧೮

ಜೀವರು ಮಾಡುವ ದ್ವಂದ್ವ ಕರ್ಮ
ಹರಿಸೇವೆಯನಿಪವೆಂಬೋದು ಖರೆ
ಕೋವಿದರೀ ತೆರಾಮನದಿ ನಿತ್ಯದಲಿ
ಭಾವಿಸುತಿಹರೆಂಬೋದು ಖರೆ ೧೯

ಅಜನಯ್ಯನ ಪದ ಭಜಿಸುವರೆ
ನಿಜದ್ವಿಜರಹುದೆಂಬೋದು ಖರೆ
ಸುಜನರೊಂದಿಗೆ ದ್ವೇಷಮಾಡುವರೆ
ದನುಜರೆನಿಪರೆಂಬೋದು ಖರೆ ೨೦

ವಿಧಿನಿಷೇದಗಳು ಇತರರಿಗುಂಟು
ಬುಧರಿಗಿಲ್ಲವೆಂಬೋದು ಖರೆ
ಶ್ರೀದನುಳಿದ ವರ್ಣಕರ್ಮಮಾಳ್ಪರಿಗೆ ಮೋದವೆ
ಇಲ್ಲೆಂಬೋದು ಖರೆ ೨೧

ಮುಕ್ತಿಮಾರ್ಗಕೆ ಎಲ್ಲಕಿಂತ ಹರಿಭಕ್ತಿಯ
ವರವೆಂಬೋದು ಖರೆ
ಯುಕ್ತಿಯ ವಚನಗಳಲ್ಲವು ಇವು ವೇದೋಕ್ತಿಗಳ-
ಹುದೆಂಬೋದು ಖರೆ ೨೨

ಅರಿಯಲು ಹರಿಗುಣ ಓರ್ವಸರಸ
ಸದ್ಗುರುವರಬೇಕೆಂಬೋದು ಖರೆ
ಗುರುವಿನ ಸುಂದರ ಚರಣದ ಸ್ಮರಣೆಯು
ಪರಮಸೌಖ್ಯವೆಂಬೋದುಖರೆ ೨೩

ಹರಿಯು ಪರನು ಮಿಕ್ಕಾದವರಾತನ ಚರಣ
ಸೇವಕರು ಖರೆ ಖರೆ
ಗುರುವಿನ ಕರುಣವೆ ಪರಮ ಸೌಖ್ಯವನು
ಗರಿಯುತಲಿರುವದು ಖರೆ ಖರೆ ೨೪

ರಘುಪತಿ ಎಂಬೋ ನಾಮ ಧ್ಯಾನದಿಂದಘ
ಹೋಗುವದು ಖರೆ ಖರೆ
ಜಗದೋದರ ಶಿರಿಗೋವಿಂದ ವಿಠಲ
ನಿಗಮಗೋಚರನು ಖರೆ ಖರೆ ೨೫

## ಗಣೇಶ ಪ್ರಾರ್ಥನೆ

೧

ಸಿಂಧೂರ ವದನ ಕೊಡುವರ ಸಿಂಧೂರ ವದನ ಪ

ಇಂದುಧರಾತ್ಮಜ ವಂದಿಸುವೆನಾ ಅ.ಪ

ಮುದಮುನಿ ಮತಾಂಬುಧಿಚಂದಿರ
ಬುಧಜನ ಪ್ರಸಂಗದಿ ಭವಹರ
ಮಧು ವಿರೋಧಿಯ ಕಥಾಮೃತಶ್ರವಣದಿ
ಒದಗಿಸು ಮಮ ಸುಜ್ಞಾನ ಮಾನಸದಿ ೧

ಭಜಕರ ಮನೋರಥ ಪೂರಕ
ಸುಜನರ ಭವಾಂಬುದಿ ತಾರಕ
ವಿಜಯ ಸಾರಥಿಯ ಭಜನೆಯ ಮಾಡಿಸೋ
ವೃಜಿನ ವಾರಿಧಿ ಕುಂಭ ಸಂಭವ ೨

ಗಿರಿಜೆಯ ಕುಮಾರ ಕೃಪಾಕರ
ಶರಧಿಜೆ ಮನೋಹರ ಕಾರ್ಪರ
ನರಮೃಗೇಂದ್ರ ಚರಣಾಂಬುಜ ಮಧುಕರ
ಕರುಣಿಸೆನಗೆ ಸಿದ್ಧಿಯನು ಕಾರ್ಯದಲಿ ೩

## ದೇವದೇವತೆಗಳ ಸ್ತುತಿ

### ೨

ವೀರನ ನೋಡಿರೈ, ನರಮೃಗಾಕಾರನ ಪಾಡಿರೈ ಪ

ಕಾರ್ಪರ ಋಷಿ ತಪಕೊಲಿದು ಅಶ್ವತ್ಥದಿ ಮೆರೆವಾ
ಭಕುತರ ಪೊರೆವಾ ಅ.ಪ

ಚಾರು ಚರಣಯುಗಳಾರಾಧಿಸುವರ ದುರಿತ ತಿಮಿರಕೆ ಸವಿತ
ವಾರಿಜಭವ ತ್ರಿಪುರಾರಿ ಮುಖಸುರ ವ್ರಾತ ಸೇವಿತ ತ್ವರಿತ
ನಾರಾಯಣ ಮುನಿ ಪೂಜೀತ ಪದ
ಮದ್ಬಂಧು ಪೊರೆಯೊನೀನೆಂದು
ಪ್ರಾರ್ಥಿಸುವರಿಗಭೀಷ್ಟಿಯಗರಿಯಲು ದೇವ ತರುಸ್ವಭಾವ ೧

ಉಗ್ರನಾದರು ಭಕುತಾಗ್ರಣಿಗಳಿಗೆ ಅನುಗ್ರ ಒಲಿವನು ಶೀಘ್ರ
ವಾಗ್ದೇವಿಯರ ಸನಾಜ್ಞದಿ ನಮಿಸಿ ಪ್ರಹ್ಲಾದ ಸ್ತುತಿಸಲು ಒಲಿದ
ಉಗ್ರವದನ ಶಾಲಿಗ್ರಾಮಗಳ ರೂಪದಲಿ ವ್ಯ-
ಕ್ತಾಗ್ರದಲಿ ಭಾರ್ಗವಿ ರಮಣನನುಗ್ರಹಿಸಲು ಭಕುತರನ
ಪ್ರಕಟನಾಗಿಹನ ೨

ಸ್ಥಿರಚರದೊಳು ತನ್ನಿರುವಿಕೆಯೆನು ಬುಧಜನಕೆ
ತೋರಿಸುವದಕೆ
ಸುರುಚಿರ ಷೋಡಶಕರಗಳಿಂದಾಯುಧ ಧರಿಸಿ
ಅಸುರನ ಮಥಿಸಿ
ತರುಮೂಲದಳೊವತರಿಸಿ ಚಕ್ರಾಂಕಿತಶಿಲದಿ
ನೆಲಸಿಕರುಣದಿ
ಶರಣು ಜನಕೆ ಪರಿಹರಿಸ್ಯಭಯ ನೀಡುವನ
ದಿವಿಜರೊಡೆಯನ ೩

ಕ್ಷೋಣಿಯೋಳಿಸು ಸ್ಥಾನದರ್ಶನದಿ ಮನುಜನ
ಪೋಪುದು ವೃಜಿನ
ಸ್ಥಾನದ ಮಹಿಮೆ ಪುರಾಣದಿ ಪೇಳಿರುವದನ
ತಿಳಿವದು ಮುನ್ನ
ಭಾನು ಕರ್ಕಾಟಸ್ಥಾನದಿ ಬರುವ ಕಾಲದಲಿ ತೀರ್ಥಗಳಲ್ಲಿ
ಸ್ನಾನ ಜಪಾನುಷ್ಠಾನ ಮಾಳ್ಪರಿಗೆ ಒಲಿವ
ಹೃದಯದಿ ಪೊಳಿವ ೪

ಚಾರು ಶ್ರೀಕೃಷ್ಣಾತೀರದಿ ಮೆರೆವಾಶ್ವತ್ಥ
ತರುವರ ಸಂಸ್ಥಾ
ನಾರದ ಮುನಿ ಸಂಕೀರ್ತಿತ ಪಾವನ
ಚರಿತ ತ್ರಿಗುಣಾತೀತ
ಕಾರ್ಪರ ನಿಲಯ ಶ್ರೀನಾರಸಿಂಹನ
ಪದಯುಗಲ ಬಿಡದನುಗಾಲ
ಸಾರಿ ಭಜಿಪರಿಗಪಾರ ಸೌಖ್ಯಗಳ ಗರಿವ ವಿಘ್ನವ ತರಿವ ೫.

## ೩

ಕಾಯೇ ಕಮಲಾಲಯೇ
ಮಧು ಮಥನ ಸತಿಯೆ ಪ

ಕಾಯಜಾತನ ತಾಯೆನಮಿಸುವೆ
ಕಾಯೆ ತ್ರಿಜಗಕೆ ತೋಯಜಾಂಬಕಿ ಅ.ಪ

ತೋಯಜಾಸನ ಮುಖ್ಯ ತ್ರಿದಶ ನಿ
ಕಾಯ ಸಂಶೇವಿತಳೆ ಬೇಡುವೆ

ಹೇಯ ವಿಷಯವ ಮರಸಿ ಹರಿಪದ
ತೋಯಜಕೆ ಮನವೆರಗುವಂದದಿ ೧

ಘೋರತರ ಸಂಸಾರ ಶ್ರಮ ಪರಿ
ಹಾರ ಮಾಳ್ಪ ಸಮೀರ ಸಮಯದಿ
ಸಾರವನು ಸುಜನರಿಗೆ ಬೋಧಿಪ
ಸೂರಿಗಳ ಸಹವಾಸ ಪಾಲಿಸಿ ೨

ಭಾರ್ಗವಿಯೆ ಕಾಮಾದಿ ಷಡ್ರಿಪು
ವರ್ಗವನು ಗೆಲುವದಕೆ ಗುರುಗಳ–
ನು ಗ್ರಹಿಸಿ ಸುಜ್ಞಾನ ಭಕುತಿ ವೈ
ರಾಗ್ಯ ವೆಂಬುವ ಭಾಗ್ಯ ಒದಗಿಸಿ ೩

ರಾಮನರಸಿಯೆ ನಿಮ್ಮ ಶುಭಪದ
ತಾಮರಸವನು ಬಿಡದೆ ಪೂಜಿಪ
ಕಾಮಿನೀ ಜನ ಸ್ತೋಮಕನುದಿನ
ಕಾಮಿತಾರ್ಥಗಳಿತ್ತು ಕರುಣದಿ ೪

ಮಂಗಳಪ್ರದ ಕೃಷ್ಣವೇಣಿ ತ–
ರಂಗ ಶೋಭಿತ ಕಾರ್ಪರಾಲಯ
ತುಂಗ ಮಹಿಮ ವಿಹಂಗ ರಾಜ ತು
ರಂಗ ಶ್ರೀ ನರಸಿಂಗ ನರಸಿಯೆ ೫

## ೪

ದುರ್ಗೇ ಪಾಲಿಸೆ ಹೇ ದುರ್ಗೇ ಪಾಲಿಸೆ ಪ

ಭಾರ್ಗವಿ ಭಜಕರ ವರ್ಗವ ಕರುಣದಿ ಅ.ಪ

ಸರ್ಗಸ್ಥಿತಿ ಲಯಕಾರಣೆ ಜಗಕೆ ಸು
ಮಾರ್ಗದಿ ನಡೆಯಲನುಗ್ರಹ ಮಾಡೆ ೧

ವಂದಿಸುವೆನು ಭವಬಂಧವ ಬಿಡಿಸ್ಯಾ
ನಂದವ ಕರುಣಿಸು ನಂದಾತ್ಮಜಳೆ ೨

ಕಡಲತನುಜೆ ತವಕಡು ಕರುಣದಲಿ
ಜಡಜಭವ ಮುಖರು ಪಡೆದರು ಪದವನು ೩

ಧಾರುಣೆ ನಭ ಸಂಚಾರಿಣೆ ಆಯುಧ
ಧಾರಿಣಿ ಭವಭಯಹಾರಿಣಿ ನಮೊನಮೋ ೪

ಇಂದಿರೆ ಪದುಮ ಸುಮಂದಿರೆ ತವಪದ
ದ್ವಂದ್ವದಿ ಭಕುತಿಯ ಪೊಂದಿ ಸುಖಿಸುವಂತೆ ೫

ವೀರರೂಪಿ ಅಸುರಾರಿಯೆ ತವಪರಿ
ವಾರದ ಭಯವನು ತಾರದಿರೆಂದಿಗೂ ೬

ಮಂಗಳಕೃಷ್ಣ ತರಂಗಿಣೆ ಕಾರ್ಪರ
ತುಂಗಮಹಿಮೆ ನರಸಿಂಗನ ರಾಣಿ ೭

೫

ಶಿರಿದೇವಿಯೆ ಪೊರಿಯುವದೆನ್ನನು ತಾಯೆ ಭಾ
ಸ್ಕರ ಪುರ ನಿಲಯೆ ಪ

ಧರಣಿಸುರವರನಿಗೊಲಿದು ಶ್ರೀಗಂಧದ
ವರ ಶಿಲೆಯೊಳು ನೆಲಿಸಿರುವ ಶುಭಾಂಗಿಯೆ ಅ.ಪ

ವರಕೊಲ್ಲಾಪುರ ಕ್ಷೇತ್ರದೊಳಿರುವಂಥ
ಲಕುಮಿಯೆ ತವ ದರುಶನ
ವರುಷಂಪ್ರತಿ ಮಾಡುವ ನೇಮಾಸಕ್ತ ಶ್ರೀ ಲಕ್ಷ್ಮೀಕಾಂತ

ವರನಾಮಕ ದ್ವಿಜ ವರಗೊಲಿದು ಬಂದಂಥ
ತತ್ಕರಸಂಪೂಜಿತ
ವರಗೋಪುರದಿಂ ಪರಿಶೋಭಿತ ಮಂದಿರದೊಳು
ವೆಂಕಟಗಿರಿ ರಮಣನ ಸತಿ ೧

ಪದ್ಮೇ ಪ್ರಣಮಾಮಿ ಭವತ್ಪದ ಪದ್ಮೆ ವಾರಿಜದಳ ಸದ್ಮೆ
ಪದ್ಮಾನನೆ ಸ್ಮರಿಸುವೆ ಕರಧೃತ ಪದ್ಮೆ ವಾಸಯಿ ಮಮಸದ್ಮನಿ
ಪದ್ಮಾವತಿ ಪದ್ಮಜನುತ ಪದಪದ್ಮೇ ಉದ್ಭವಿಸಿದ ಪದ್ಮದಿ
ಪದ್ಮಲೋಚನೆ ಸಮುದ್ರಕುಮಾರಿಯೇ
ಪದ್ಮನಾಭ ಹೃತ್ಪದ್ಮನಿವಾಸಿನಿ ೨

ಕ್ಷೋಣಿಸುರ ಪೂಜಿತೆ ಪಾವನ ಚರಿತೆ
ಸಿಂಹಧ್ವಜ ಶೋಭಿತೆ
ಸಾನುರಾಗದಿ ಭಜಿಸುವರಿಗೆ ಪ್ರೀತೆ ಕಾಮಿತ ಫಲದಾತೆ
ಜ್ಞಾನಾ ಸದ್ಭಕುತಿಯು ಕರುಣಿಸು ಮಾತೆ ವರದಾಭಯಹಸ್ತೆ
ಕ್ಷೋಣಿಯೊಳಗೆ ಸುಸ್ಥಾನ ಕಾರ್ಪರದ ಶ್ರೀನರಸಿಂಹನ
ರಾಣಿಯೆ ನಮಿಸುವೆ ೩

ವಂದಾರುಜನ ಮಂದಾರಾಮಿಂದಿರಾ ಸುಂದರಾನನಾಂ
ವಂದೇಹಂ ಭಾಸ್ಕರ ಕ್ಷೇತ್ರ ನಂದಸೂನು ಪದಾಶ್ರಯಂ

## ೬

ಚಿಂತ್ರವೇಲಿನಿಲಯ ಭಾರತಿ ಕಾಂತನೆ ಪಿಡಿಕೈಯಾ ಪ

ಅಂತರಂಗದಲಿ ಚಿಂತಿಪರಘುಕುಲಧ್ವಾಂತದಿವಾಕರ
ಸಂತತ ಸ್ಮರಿಸುವೆ ಅ.ಪ

ಲಂಘಿಸಿ ವಾರಿಧಿಯ ಶ್ರೀರಾಮಾಂಗುಲಿ ಮುದ್ರಿಕೆಯ
ಅಂಗನಿಗೆ ಕೊಟ್ಟು ಮಂಗಳಾಂಗ ರಘು
ಪುಂಗವಗೆ ಕುಶಲ ಸಂಗತಿ ತಿಳಿಸಿದ ೧

ಇಂದು ಕುಲದಿ ಜನಿಸಿ ಕುಂತಿಯ
ಕಂದ ಭೀಮನೆನಿಸಿ ನಿಂದು ರಣದಿಕುರು
ವೃಂದವ ಮಥಿಶ್ಯಾನಂದ ಸುತನೊಲಿಮೆ
ಛಂದದಿ ಪಡೆದಿಹ ೨

ಮೇದಿನಿಯೊಳು ಜನಿಸಿ ಬಹುದು
ರ್ವಾದಿಗಳನು ಜಯಿಸಿ ಮೋದಮುನಿಯೆನಿಸಿ
ಭೇದವ ಬೋಧಿಸಿ ಸಾಧು ಜನಕೆ ಬಲು
ಮೋದವ ಗರಿದಿ ೩

ಶೇಷದಾಸರಿಗೊಲಿದಿ ಅವರಭಿಲಾಷೆಯ
ಪೂರ್ತಿಸಿದಿ ಪೋಷಿಸೆನ್ನ ಕರುಣಾ ಸಮುದ್ರ ಭವ
ಕ್ಲೇಶವ ಕಳೆಯಾ ಗಿರೀಶ ಮುಖವಿನುತ ೪

ಭೀತರನ್ನು ಪೊರಿವಿ ಭಜಕರ ಪಾತಕವನು ಕಳೆವಿ
ಖ್ಯಾತ ಕಾರ್ಪರ ಕ್ಷೇತ್ರದಿ ನರಮೃಗ
ನಾಥನ ಪರಮ ಪ್ರೀತಿಪಡೆದಿಹ ೫

## ೭

ಪಾವಮಾನಿಯೇ ಪಾಲಿಸೋ ಕರಪಿಡಿದುದ್ಧರಿಸೋ
ಸೇವಕರೊಳಗಾಡಿಸೋ ಪ

ಶೇವಿಸುವವರಿಗೆ ದೇವತರುವೆನಿಸಿ
ಭೂವಲಯದಿ ಶುಭಭಾವಣಿ ನಿಲಯ ಅ.ಪ

ಜೀವೋತ್ತುಮಾನೀನೆನ್ನುತ ಹೇ ಪ್ರಾಣನಾಥ
ಭಾವಿಸುವೆನೊ ಸಂತತ
ಪಾವನ ಚರಿತ ಕೃಪಾವಲೋಕನದಿ
ಪಾವನ ಮಾಡ್ಯೆ ಭಾವಿ ವಿಧಾತ ೧

ತುಂಗತರಂಗದುದಧಿ ಲಂಘಿಸುತ ಮುದದಿ
ಅಂಗನೆ ಸೀತೆ ಕರದಿ
ಉಂಗುರವ ಕೊಡುತ ಮಂಗಳಾಂಗ ರಘು
ಪುಂಗವಗೆರಗಿ ಸುಸಂಗತಿ ತಿಳಿಸಿದ ೨

ಇಂದು ಕುಲದಿ ಜನಿಸಿ ರಿಪುವೃಂದವ ಮಥಿಸಿ
ಇಂದ್ರಜನಣ್ಣನೆನಿಸಿ
ಅಂದು ರಣದಿ ಕುರು ವೃಂದವ ಮಥಿಶ್ಯಾ
ನಂದ ಕಂದ ಮುಕ್ಕುಂದನ ನೊಲಿಸಿದ ೩

ಮೇದಿನಿಯೊಳು ಜನಿಸಿ ಮೋದಮುನಿಯೆನಿಸಿ
ಭೇದಮತವ ಸ್ಥಾಪಿಸಿ
ವಾದಿಗಳನು ನಿರ್ವಾದಗೈಸುತಲಿ
ಸಾಧು ಜನಕೆ ಬಲು ಮೋದವಗರೆದ ೪

ಪುರಮರ್ದನಾದಿ ಸುರವರ ನಿರುತ ಸೇವಿಪರ
ದುರಿತ ತಿಮಿರ ಭಾಸ್ಕರ
ಶರಣು ಜನಕೆ ಸುರತರುವೆಂದೆನಿಸಿದ
ಸಿರಿ ಕಾರ್ಪರ ನರಹರಿ ಗತಿಪ್ರೀಯ ೫

## ೮

ಭಾರತೀ ರಮಣ ಸುರವಿನುತ ಚರಣ
ಶಾರದಾ ಪುರ ಶರಣ ಪ

ನೂರು ಯೋಜನಮಿರ್ದವಾರಿಧಿ ಲಂಘಿಸಿ ಬೇಗ
ಧಾರುಣಿ ಸುತೆಯ ಕಂಡು ದೂರ ನಮಿಸಿ
ಸಾರಿ ಮುದ್ರಿಕೆಯ ನಿತ್ತು ತೋರಿರಾಕ್ಷಸಗೆ ಭಯ
ಶ್ರೀರಾಮಗೆ ಬಂದು ಕ್ಷೇಮ ವಾರುತಿಯ ಪೇಳಿದಂಥ ೧

ಇಂದು ಕುಲದಲ್ಲಿ ಪಾಂಡುನಂದನನೆನಿಸಿ ಜರಾ
ಸಂಧ ಮುಖರನು ಗದೆಯಿಂದವರಸಿ
ಅಂದುರಣದಲ್ಲಿ ಕರುವೃಂದವ ಮಥಿಸಿ ಆ
ನಂದ ಕಂದನೊಲಿಮೆಯ ಛಂದದಿ ಪಡೆದು ಗುರು ೨

ಶ್ರೀಧನಾಜ್ಞೆಯಿಂದ ಪುಟ್ಟಿ ಮೇದಿನಿ ಸುರ ಗೃಹದಿ
ಮೋದ ತೀರ್ಥರೆಂದೆನಿಸಿ ವಾದದಿಂದಲಿ
ವಾದಿ ಮತ್ತ ವಾರಣ ಮೃಗಾಧಿಪರೆನಿಸಿ ಪಂಚ
ಬೇಧ ಬೋಧಿಸುವ ಶಾಸ್ತ್ರ ಸಾದರದಿ ವಿರಚಿಸಿದ ೩

ಕಾಲಕಾಲದಲಿ ದ್ವಿಜರಾಲಯದಿ ಬಂದು ನಿನ್ನ
ಬಾಲವನಿತೆರ ಸಹ ಶೇವಿಸುವರು
ಪಾಲಿಕಿ ಉತ್ಸವದಲ್ಲಿ ಶೇರುವದು ಪೌರಜನ
ಪಾಲಿಸಬೇಕಯ್ಯ ಪಾಂಚಾಲಿರಮಣನೆ ನಮೊ ೪

ನೀರಜಾಸನಾದಿ ವಂದ್ಯ ಪಾರುಮಾಡೋ ಭವ ಕೂ
ಪಾರ ನಾವಿಕನೆ ಎಂದು ಪ್ರಾರ್ಥಿಸುತಲಿ
ಸೇರಿದ ಸಜ್ಜನರಘ ದೂರಮಾಡಿ ಪೊರೆವಂಥ
ಕಾರ್ಪರ ನಿಲಯ ಸಿರಿನಾರಸಿಂಹ ನೊಲಿಸಿದ ೫

## ೬

ಭಾರತೀವರ ಪಾಹಿಮಾಂ ಟೊಣ್ಣೂರು
ಮಂದಿರ ಕರುಣಾಕರ ಪ

ಸೇರಿದವರ ದುರಿತ ಘನ ಸಮೀರ
ಸುರವರ ಮಾಮುದ್ಧರ ಅ.ಪ

ನೂರುಯೋಜನದುದಧಿ ಲಂಘಿಸಿ ಧಾರುಣಿ
ಸುತೆಯಾ ಶುಭವಾರ್ತೆಯಾ

ಶ್ರೀರಾಮನಿಗರುಹಿದ ಬಲುಶೂರ
ಬಿಡಿಸಯ್ಯ ಸಂಸೃತಿ ಭಯ ೧

ಕ್ರೂರದ್ವೈತರ ಮಥನದಿ ಕಂಸಾರಿ ಕರುಣವ
ಪಡೆದಿಯೊ ಜವ
ಕೌರವಾಂತಕ ನೀಡೋ ಮನದಿ ಶೌರಿ ಚರಣವ
ನೋಳ್ಪ ಸುಖವ ೨

ಧೀರ ಕಾರ್ಪರ ನಾರಸಿಂಹ ನಾಪಾರ
ಮಹಿಮೆಯ ತಿಳಿವ ಬಗೆಯ
ಸಾರ ಶಾಸ್ತ್ರದಿ ಪೇಳಿದ ಸುಖತೀರಥಾಹ್ವಯ
ಕೊಡು ಸುಮತಿಯ ೩

## ೧೦

ಭಾರತೀಶಪಾಹಿ ಸುರವರ ನಾ ಮುಗಿವೆನು ಕರ ಪ

ಸೂರಿನಿವಾಸ ಭೋಗಾಪುರ ಮಂದಿರ ಮಾಮುದ್ಧರ ಅ.ಪ

ಶ್ರೀರಘುವರನಾಜ್ಞೆಯಿಂದಲಿ ವಾರಿಧಿಯಕ್ಷಣದಲಿ
ಹಾರಿ ಭೂಮಿಸುತೆ ಗೆರಗುತಲಿ ಮುದ್ರಿಕೆಯ ಕೊಡುತಲಿ
ಶ್ರೀರಾಮಗೊಂದಿಸಿದಿ ಕ್ಷೇಮದಲಿ ಇಹಳೆಂದು ಪೇಳಿ ೧

ಇಂದು ಕುಲದಿ ಪಾಂಡು ನೃಪತಿಯ ಎನಿಸಿದೆಯೊ ತನಯ
ಬಂಥ ಕೌರವ ವೃಂದ ಮಥಿಸಿದೆಯಾರಣದೊಳಗೆ ವಿಜಯ
ನಂದಸುತನ ನೊಲಿಮೆ ಪಡದಿಯಾ ಭೀಮಶೈನರಾಯ ೨

ಮೇದಿನಿ ಸುರಗೃಹದಿ ಜನಿಸಿದ ವೇದಾರ್ಥ ತಿಳಿಸಿದ
ವಾದಿಗಳ ನಿರ್ವಾದಗೈಸಿದ ದಿಗ್ವಲಯ ಚರಿಸಿದ ಭೇದ
ಭೋದಕ ಶಾಸ್ತ್ರವಿರಚಿಸಿದ ಶ್ರೀ ಪೂರ್ಣಬೋಧ ೩

ಕಾಲಕಾಲಗಳಲ್ಲಿ ದ್ವಿಜಜನ ಬರುತಿಹರು ನಿನ್ನ
ಧೂಳಿ ದರುಶನಾಬಿಷೇಚನ ಶೇವಿಪರು ಘನ್ನ
ಪಾಲಿಸಬೇಕಯ್ಯ ಭಕುತರನಾ ಪಾಂಚಾಲಿರಮಣ ೪

ನೀರಜಾಸನಾದಿ ಸುರಗಣ ವಂದಿತ ಸುಚರಣ
ಕಾರ್ಪರ ಶಿರಿನಾರಸಿಂಹನ ಒಲಿಸಿರುವ ನಿನ್ನ
ಶೇರಿದವರಭೀಷ್ಟ ವರ್ಷಣ ದುರಿತಾಪ ಹರಣ ೫

## ೧೧

ಭಾರತೀಶನೆ ಬೇಗ ಬಾರೊ ಮನ್ಮನದಲಿ
ತೋರೊ ನಿಮ್ಮಯ ಚರಣ ಭಜಕಾರ್ತಿ ಹರಣ ಪ

ಸಾರಿ ಭಜಿಸುವೆನು ಚಾರು ಭಾಸ್ಕರ ಕ್ಷೇತ್ರ
ಗಾರನೆ ದಶರಥಕುಮಾರ ಸೇವಕಾಗ್ರಣಿ ಅ.ಪ

ನೂರುಯೋಜನಮಿರ್ದ ವಾರಿಧಿ ಲಂಘಿಸಿದ
ಶೂರನೆ ಗಿರಿಯಾಶ್ರಯದಿ ತೋರುವಿ ಶ್ರಮಪರಿ–
ಹಾರಾರ್ಥಿಗಳ ತೆರ ಘೋರ ಪಾತಕಾಂಬುದ ಸ
ಮೀರ ಪಾಲಿಸೆನ್ನನು ೧

ತಂದು ನೀಡಿದಿ ದ್ರುಪದ ನಂದಿನಿಯಳಿಗೆ ಸೌ
ಗಂಧಿಕ ಪುಷ್ಪ ದಯದಿ ವಂದಿಸುವೆನು ಮನ
ಮಂದಿರದಲಿ ಯದು ನಂದನನಂಘ್ರೀ ನೋಳ್ಪಾ
ನಂದವ ಕರುಣಿಸೊ ೨

ಭೇದಾಬೋಧಿಸಿ ಬಲುಮೋದವ ಗರಿವ ಶಾಸ್ತ್ರ
ನೀದಯದಲಿ ರಚಿಸಿ ವಾದಿ ಮದಗಜ ಮೃ

ಗಾಧಿಪನೆನಿಸಿದ ಮೋದತೀರ್ಥಾಹ್ವಯಾ–
ಗಾಧ ಮಹಿಮ ಗುರು ೩

ಸತತ ಸೇವಿಪ ಗರ್ಭವತಿಯಾಗಿರುವ ವಿಪ್ರ
ಸತಿಯ ನುಡಿಯ ಲಾಲಿಸಿ ನತಜನ ಪಾಲನೆ ಪ–
ರ್ವತ ದಿಂದಿಳಿದಶ್ವತ್ಥ ಕ್ಷಿತಿರುಹ ಮೂಲದಿ ಪಾ–
ರ್ವಾತಿ ನಾಥ ಸೇವಿತನೆ ೪

ಈ ಸುಕ್ಷೇತ್ರದೊಳು ವಿದ್ವಾಂಸ ದೇವರಾಜಾಖ್ಯ
ಭೂಸುರ ವರ್ಯ ಸನ್ನುತ ವಾಸಕಾರ್ಪರ ನರ
ಕೇಸರಿ ಗತಿ ಪ್ರಿಯ ದಾಸ ಪಾಲಿಸೊ ಗುರು
ವ್ಯಾಸರಾಜ ಪೂಜಿತ ೫

## ೧೨

ಭಾವಿ ಅಜನಂಘ್ರಿಯುಗವ ಭಜಿಸಬಾರದೆ ಪ

ಭಜಕ ಮಾನವರ ವೃಜಿನಘನಸಮೀರ
ಕುಜನವನಕುಠಾರ ಸುಜನರಿಗೆ ಮಂದಾರನೆಂದು
ಭಜಿಸಬಾರದೆ ಅ.ಪ

ಭೂತಳದಿ ಶ್ರೀರಾಮ ದೂತನೆನಿಸಿ ಭಕುತ
ವ್ರಾತಕೆ ಸಕಲೇಷ್ಟದಾತನೆಂದು ಪ್ರೀತಿಯಿಂದ ೧

ಪುಂಡ ಕೌರವರ ಹಿಂಡುಗೆಲಿದು ರಮೆಯ
ಗಂಡನೊಲಿಸಿದ ಮಧ್ಯ ಪಾಂಡವನ ಪದ ಪುಂಡರೀಕ ೨

ಶ್ರೀನರಸಿಂಹನೆ ಜಗನಿರ್ಮಾಣಕಾರಣನೆಂದು
ಜ್ಞಾನದಾಯಕ ಮಧ್ವ ಮೌನಿಯೆನಿಸಿದ ಪ್ರಾಣಪತಿಯ ೩

## ೧೩

ಭೀಮ ಶ್ಯೇನನೆ ಸತ್ಯಭಾಮಾ ಪ್ರಿಯನ ಪರಮ
ಪ್ರೇಮ ಪಾತ್ರನೆ ಪಾಹಿಮಾಂ ಪ

ಭೂಮಿಯೊಳು ಶೇವಿಸುವರಿಗೆ ಸುರ
ಭೂಮಿರುಹ ವೆಂದೆನಿಸಿ ಪೊರೆಯಲು
ಗ್ರಾಮ ಮೋತಂಪಲ್ಲಿ ಕ್ಷೇತ್ರ ಸುಧಾಮರಿಪುಕುಲ
ಭೀಮನೆನಿಸಿದ ಅ.ಪ

ರಾಮಕಾರ್ಯವನು ನಿಷ್ಕಾಮದಿ ಸಾಧಿಸಿ
ಧಾಮ ಕಿಂಪುರುಷದಲ್ಲಿ ಭೂಮಿಜಾವಲ್ಲಭನ
ಶುಭಗುಣ ಸ್ತೋಮಗಾನದಿ ರಮಿಸುತಿರೆ ಬಡ
ಭೂಮಿದೇವನ ಪ್ರಾರ್ಥನದಿ ಬಂದೀ ಮಹಾ ಶಿಲೆ
ಯೊಳಗೆ ನೆಲಸಿಹ ೧

ರಾಜಕುಲಜ ಪಾಂಡುರಾಜ ನಾತ್ಮಜ ಧರ್ಮರಾಜನನುಜನೆನಿಸಿ
ರಾಜ ಸೂಯಾಗವನೆ ಮಾಡಿಸಿ ಪೂಜಿಸಿದಿ ಸಿರಿಕೃಷ್ಣನಂಘ್ರಿಯ
ರಾಜ ಕೌರವ ಬಲವ ಮದಿಸಿ ವಿರಾಜಿಸಿದ ಸುರರಾಜ
ನಮೋ ನಮೋ ೨

ಶ್ರೀದನಾಜ್ಞಾದಿ ಬಂದು ಮೇದಿನಿಯೊಳು
ಪುಟ್ಟಿಮೇದಿನಿ ಸುರಸದ್ಮದಿ
ಮೋದ ತೀರ್ಥಾಹ್ವಯನೆನಿಸಿ ಬಹುವಾದಿ
ಗಜ ಪಂಚಾಸ್ಯನೆನಿಸಿಸು
ಬೋಧದಾಯಕ ಶಾಸ್ತ್ರವಿರಚಿಸಿ ಸಾಧು
ಜನಕತಿ ಮೋದನೀಡಿದ ೩

ವಂದಿಪ ಜನರಘ ವೃಂದವಾರಿದ
ಗಣಕೆ ಗಂಧವಾಹನನೆನಿಸಿ
ಬಂದು ಪದುಮಾವತಿಯ ಪರಿಣಯವೆಂದು
ಶೇಷ ಗಿರೀಂದ್ರಯಾತ್ರೆಗೆ
ಇಂದ್ರ ದಿಕ್ಕಿನ ದ್ವಾರದಲಿ ನೀನಿಂದು ಭಕುತರ
ವೃಂದ ಸಲಹುವಿ ೪

ಭಾರತೀಶನೆ ನಿನ್ನ ಚಾರುಚರಣಯುಗ್ಮ
ಶೇರಿದವನೆ ಧನ್ಯನೋ
ಘೋರ ಪಾತಕಿಯಾದ ವಿಪ್ರನು ಸಾರಿ
ಭಜಿಸಿ ವಿಮುಕ್ತನಾದನು
ನಾರದನು ಬಂದಿಲ್ಲಿ ಶೇವಿಸಿ ಸೇರಿದನು
ಸುರಋಷಿಯ ಪದವನು ೫

ಮೇಲೆ ಗೋಪುರದಿ ಭೂಪಾಲ ನಿರ್ಮಿತ
ಸುವಿಶಾಲ ಮಂಟಪ ಮಧ್ಯದಿ
ಕಾಲ ಕಾಲಗಳಲ್ಲಿ ವಿಭವದಿ ವಾಲಗವ
ಕೈಕೊಳುತ ಭಕುತರ
ಮ್ಯಾಳದಿಂ ಪಾಂಚಾಲಿರಮಣ ಕೃಪಾಳೊ
ಗುರುವರ ಪಾಲಿಸೆನ್ನನು ೬

ಬಂಗಾರದಾಭರಣಂಗಳಿಂದೊಪ್ಪುತ ಶೃಂಗಾರದಿಂ ಶೋಭಿತ
ತುಂಗರಥದೋಳ್ ಕುಳಿತು ನೋಳ್ಪಜನಂಗಳಿಗೆ
ಸರ್ವೇಷ್ಟದಾಯಕ
ಮಂಗಳಪದ ಕಾರ್ಪರದ ನರಸಿಂಗನಿಗೆ
ಪ್ರಥಮಾಂಗನೆನಿಸಿದ ೭

## ೧೪

ಮರುತನಾತ್ಮಜ ನಿನ್ನ ಚರಣ ಕಮಲಯುಗ್ಮ
ನೆರೆನಂಬಿದವ ಧನ್ಯನೊ ಪ

ಧರೆಯೊಳಗೆ ರಘುವರನ ಶೇವಿಸಿ ಶರಣು ಜನರನು
ಪೊರೆವುದಕೆ ಭೂಸುರಗಣದಿ ರಾಜಿಸುವ ರಾಯಚೂರ
ಪುರದ ಕೋಟೆಯೊಳಿರಲು ಬಂದಿಹ ಅ.ಪ

ಖರವೈರಿಯಾಜ್ಞೆಯ ಶಿರದಿವಹಿಸಿ
ಬಹುಭರದಿವಾರಿಧಿ ಲಂಘಿಸಿ
ಧರಣಿಸುತೆಯಳ ಕಂಡೆರಗಿ ಮುದ್ರಿಕೆಯಿತ್ತು
ಹರಿಭಟನೆಂದು ತಿಳಿಸಿ
ವರ ಶಿರೋರತುನವ ಧರಿಸಿ ಕರದಿ ಬಂದು
ತ್ವರದಿ ರಾಮನಿಗರ್ಪಿಸಿ
ಕುಶಲವನೆ ತಿಳಿಸಿ ಪರಮ ಕರುಣವ ಪಡೆದ
ಧೀರನೆ ಸುರವಿನುತ ತವ
ಚರಣದೆಡೆಯೊಳ್ ನಿರುತ ಪೂಜೆಯಗೊಂಬ
ಪರಿಮಳವಿರಚಿಸಿದ ಗುರುವರರ ನೋಡಿದೆ ೧

ಇಂದು ಕುಲದಿ ಪಾಂಡುನಂದನನೆನಸಿ
ಗೋವಿಂದನಂಘ್ರಿಯ ಭಜಿಸಿ
ಸಂದೇಹವ್ಯಾಕೆ ಖಳವೃಂದ ವಧವೆ ಯಜ್ಞವೆಂದು
ಮನದಿ ಭಾವಿಸಿ
ಸಿಂದೂರ ಜಲಜರಾಸಂಧಾದಿಗಳ ಮಥಿಸಿ
ನಂದಸುತನಿಗರ್ಪಿಸಿ ಪ್ರಥಮಾಂಗನೆನಿಸಿ
ವಂದಿಪರ ಭವಬಂಧ ಬಿಡಿಸ್ಯಾನಂದಗರಿವ
ಸಮರ್ಥ ತವಪದ ಕೊಂದಿಸುವೆ ಮನ
ಮಂದಿರದಿ ಯದುನಂದನನ ಪದದ್ವಂದ್ವ ತೋರಿಸು ೨

ಕ್ಷಿತಿಸುರ ಗೃಹದೊಳಚ್ಯುತನಾಜ್ಞದಿಂ
ಪುಟ್ಟಿಯತಿರೂಪವನೆಧರಿಸಿ
ಕ್ಷಿತಿಯೊಳಗಖಿಲ ದುರ್ಮತಗಳೆಂಬುವ
ಮೇಘತತಿಗೆ ಮಾರುತನೆನಿಸಿ
ಶೃತಿತತಿಯಿಂದೆ ಶ್ರೀಪತಿಯೆ ಉತ್ತಮನೆನಿಸಿ
ಪ್ರತಿಪಾದ್ಯನೆಂದು ತಿಳಿಸಿ ಸುಖ
ತೀರ್ಥರೆನಿಸಿ ಅತಿಹಿತದಿ ಸತ್ಪಥವ ತೋರಿದಿ
ಅತುಳ ಮಹಿಮನೆನುತಿಸುವೆನು
ತ್ವತ್ಕೃತ ಸುಶಾಸ್ತ್ರವನರಿತ ಬುಧಜನ ತತಿಯ ಸಂಗವ
ಸತತ ಪಾಲಿಸೋ ೩

ಫಣಿ ಪಾಶದಿಂದ ರಾವಣಿಯು ಕಪಿಗಳ ಬಿಗಿಯೆ
ತನುಮರೆಯಲು ಧುರದಿ
ಕ್ಷಣಕಾಲದಲಿ ಸಂಜೀವನ ಗಿರಿತಂದು
ಜೀವನವಿತ್ತಕಾರಣದಿ ವನಜನಾಭನು
ಮೆಚ್ಚಿ ನಿನಗಿತ್ತ ಸಂಜೀವನೆಂಬೊ ನಾಮದ
ದಯದಿ ತನ್ಮೂರ್ತಿ ಸಹಿತದಿ
ಅನಿಲಜನೆ ತಟಿತ್ಕೋಟಿ ಮಂದಿರನೆನಿಸಿ
ಸೇವಕಜನರ ಸಲಹುವಿ
ಅನುದಿನದಿ ದ್ವಿಜವರ್ಯರಿಂದರ್ಚನೆಯ
ಕೊಳುತಲಿ ಮೆರೆವದೇವನೆ ೪

ನಿರುತ ಸಮ್ಮುಖದಲ್ಲಿ ಅರಿದರಾಭಯಹಸ್ತ
ಶಿರದಿ ಮುಕುಟ ಮಂಡಿತ
ಪರಮಸುಂದರವಾದ ಶಿರಿವಲ್ಲಭನ ಮೂರ್ತಿ
ದರುಶನವನೆ ಕೊಳ್ಳುತ
ಪರಿಶೋಭಿಸುವ ಸದ್ಗೋಪುರಯುಕ್ತವಾದ
ವಿಸ್ತರ ಮಂಟಪದಿರಾಜಿತ

ಸುರಪೂಜಿತ ಕರುಣ ಶರಧಿಯೆ ಪೊರೆವದೆನ್ನನು ಶರಣು ಜನರಘ
ತರಿದಭೀಷ್ಟೆಯಗರಿವ ಕಾರ್ಪರನಿಲಯ ಸಿರಿನರಹರಿಯ
ಕರುಣವ ಪಡೆದ ಧೀರನೆ ೫

## ೧೫

ಮುಂಚೆ ನೋಡಣು ಬನ್ನಿ ಜನಗಳೆ
ಹಂಚಿನಾಳಿನವ ಹನುಮನ
ವಾಂಛಿತಾರ್ಥಗಳೀವ ಭಾವಿ
ವಿರಂಚಿದೇವ ಪದಾರ್ಹನಾ ಪ

ಅಂದು ಕಪಿಕುಲದಿಂದ ದುಸ್ತರ
ಸಿಂಧು ದಾಟಿದ ಧೀರನ
ವಂದಿಸುತ ಭೂನಂದನೆಯು
ಕ್ಷೇಮೆಂದು ರಾಮಗೆ ಪೇಳ್ದನ ೧

ಧಾರುಣಿಯೊಳವತರಿಸಿ ಕುಂತಿ
ಕುಮಾರನೆನಿಸಿದ ಧೀರನ
ಕೌರವಾಂತಕನೆನಿಸಿ ಕೃಷ್ಣನ
ಭೂರಿ ಕರುಣವ ಪಡೆದನ ೨

ವಾದಿಗಳ ನಿರ್ವಾದ ಗೈಸಿದ
ಬಾದರಾಯಣನ ಶಿಷ್ಯನ
ಭೇದಮತವನು ಸ್ಥಾಪಿಸಿದ ಗುರು
ಮೋದ ತೀರ್ಥ ಯತೀಂದ್ರನಾ ೩

ಪಾಲಕಿಯ ಉತ್ಸವದಿ ಮೆರೆಯುತ
ವಾಲಗವ ಕೈಕೊಳುವನ
ಕಾಲಕಾಲಗಳಲ್ಲಿ ಭಜಕರ
ಮ್ಯಾಳವನು ಪಾಲಿಸುವನಾ ೪

ಶೇಷಭೂಷಣ ವಾಸವಾದಿಸು
ರೇಶ ಭಕುತರ ಪೋಷನ
ಶ್ರೀಶ ಕಾರ್ಪರವಾಸ ಸಿರಿನರ
ಕೇಸರಿಗೆ ಪ್ರಿಯ ದಾಸನ ೫

## ೧೬

ರಾಮದೂತ ನೌಮಿಭಕುತ
ಕಾಮಿತದಾತ ಸುರಶೇವಿತ ಪ

ಈ ಮಹಿಯೊಳೂ ಗ್ರಾಮಕೂಡ್ಲಿಗಿ
ಧಾಮಮಾರುತ ಪಾಹಿಸತತ ಅ.ಪ

ಭೂಮಿಸುತೆಯ ಕ್ಷೇಮವಾರ್ತೆಯ
ರಾಮಗರುಹಿದ ಪದಕೆರಗಿದ
ಹೇ ಮಹಾತ್ಮನೆ ಪ್ರೇಮದಿ ರಘು
ರಾಮ ನೀಡಿದ ಬ್ರಹ್ಮನ ಪದ ೧

ಇಂದು ಕುಲದಿ ಬಂದು ಕೌರವ
ವೃಂದ ಮಥಿಸಿದೆಯಾ ಪಾಂಡು ತನಯ
ಪೊಂದಿದಿಯಾ ನಂದಗೋಪನ
ಕಂದನ ಕೃಪೆಯಾ ಪಾಲಿಸಯ್ಯಾ ೨

ವ್ಯಾಸಶಿಷ್ಯ ಯತೀಶ್ವರ ತವ
ಶಾಸ್ತ್ರದಿ ಮತಿಯಾ ಕರುಣಿಸಯ್ಯಾ
ಶ್ರೀಶಕಾರ್ಪರ ವಾಸ ಶ್ರೀನರ
ಕೇಸರಿಗೆ ಪ್ರೀಯ ಮಧ್ವರಾಯಾ ೩

## ೧೭

ವರ ಹಳ್ಳೇರಾಯಾ ಮಾಂಪಾಲಯ ಪ

ಕರ ಮುಗಿವೆನು ದುಮ್ಮದ್ರಿನಿಲಯ ಅ.ಪ

ತರಣಿ ಕುಲತಿಲಕ ಸಿರಿರಾಮನ ಪದ
ಸರಸಿಜ ಮಧುಕರ ಸುರಗಣ ಸೇವ್ಯಾ ೧

ಸೋಮ ಕುಲಜ ಬಲರಾಮನನುಜನ
ಪ್ರೇಮಪಾತ್ರ ಬಲಭೀಮನೆ ಕೃಪಯಾ ೨

ಸಿರಿಕೃಷ್ಣನೆ ಪರತರನೆಂದರುಹಲು
ವಿರಚಿತ ಶಾಸ್ತ್ರ ಶ್ರೀ ಗುರು ಮಧ್ವಾರ್ಯ ೩

ಯವನ ಕುಲದಿ ಭಜಿಸುವರಿಗ್ಳೊಲಿದೆಯಾ
ಅವನಿಸುರಾರ್ಚಿತ ಶ್ರೀ ಪವಮಾನತನಯಾ ೪

ಶರಣು ಜನಕೆ ಸುರತರುವೆಂದೆನಿಸಿದ
ಸಿರಿಕಾರ್ಪರ ನರಹರಿಗತಿ ಪ್ರೀಯಾ ೫

## ೧೮

ಸೇರಿ ಸುಖಿಸುತಿರು ಮನುಜಾ ಗುರು
ಮಾರುತಸುತನ ಶುಭ ಚರಣ ಸರೋಜ ಪ

ನೂರು ಯೋಜನಮಿರ್ದ ಉದಧಿ ದಾಂಟಿ
ಧಾರುಣಿಜಳಿಗೆ ಮುದ್ರಿಕೆಯಿತ್ತು ಜವದಿ
ಶ್ರೀ ರಘುವರಗೆ ವಿನಯದಿ ಕ್ಷೇಮ
ವಾರುತಿಯನು ಪೇಳಿದವನಂಘ್ರಿ ಮುದದಿ ೧

ಇಂದು ಕುಲದಿ ಪಾಂಡು ನೃಪನ ಪುತ್ರ
ನೆಂದು ಕರಿಸಿ ದುಷ್ಟ ಕೌರವಾಂತಕನ
ನಂದ ನಂದನನೊಲಿಸಿದನ ದೃಪದ
ನಂದಿನಿಯಳಿಗೆ ಪುಷ್ಪವ ತಂದಿತ್ತವನ ೨

ಮಧ್ಯಗೇಹ ನೆಂಬೊದ್ವಿಜನ ಗೃಹದಿ
ಮಧ್ವಾಭಿದಾನದಿ ಜನಿಸಿ ಮಾಯ್ಗಳನ
ಗೆದ್ದು ಸಚ್ಛಾಸ್ತ್ರ ರಚಿಸಿದನ ಸುಪ್ರ
ಸಿದ್ಧ ಸಿದ್ಧ ಕಾರ್ಪರ ನರಹರಿಗತಿ ಪ್ರಿಯನ ೩

## ೧೯

ಹಟ್ಟಿ ಹನುಮನ ಪಾದ ಭಜಿಸೊ ಕಷ್ಟ ತ್ಯಜಿಸೊ ಪ

ಬುದ್ಧ್ಯಾದ್ಯಷ್ಟ ಸಿದ್ಧಿಗಳನ್ನು ಥಟ್ಟನೆ ಫಳಿಸೋ ಅ.ಪ
ಎಷ್ಟು ಬಲವಂತನೊ ಈತ ಗಿರಿಯ
ಮೆಟ್ಟಿ ಹಾರಿದ ಸಮುದ್ರವ ಕಪಿನಾಥ
ಕೊಟ್ಟು ಮುದ್ರಿಕೆಯನು ಸೀತಾದೇವಿ
ಗಷ್ಟು ರಾಮಗೆ ಪೇಳಿದನು ಕ್ಷೇಮವಾರ್ತಾ ೧

ಕುಂತಿಯ ಜಠರ ಸಂಭೂತ ಕೌರ
ವಾಂತಕನೆನಿಸಿದ ಬಹು ಬಲವಂತ
ಶಾಂತ ಕಿರಣಕುಲಜಾತ ಮಾತು
ಲಾಂತಕನೊಲಿಸಿದ ದ್ರೌಪದಿ ಕಾಂತಾ ೨

ಮೇದಿನಿಯೊಳು ಮಧ್ವರಾಯಾರೆನಿಸಿ
ಭೇದಮತವ ಸ್ಥಾಪಿಸಿದ ಯತಿವರ್ಯ
ವೇದವಿನುತ ಶುಭಚರಿಯಮನವೆ
ಶ್ರೀದ ಕಾರ್ಪರ ನರಹರಿಗತಿಪ್ರಿಯ ೩

## ೨೦

ನೋಡು ಕರುಣದಿಂದ ಸರಸ್ವತಿ ನೀಡೆನಗೆ ಸುಮತಿ ಪ

ನೋಡು ಕರುಣದಿಂದಯನ್ನ ಮೂಢ
ಮತಿಯ ಕಳೆದು ಮನದಿ
ರೂಢೀಶ ಹರಿಯ ಗುಣಗಳನ್ನು
ಪಾಡಿಪೊಗಳುವಂತೆ ಯನ್ನ ಅ.ಪ

ಮೃಡ ಬಿಡೌಜರೊಡೆಯಳೆ
ನಿಮ್ಮಡಿಗಳಿಗೆರಗುವೆನು ಮಾತೆ
ಕಡಲಶಯನ ನಡಿಯುಗಲದಿ ದೃಢ
ಭಕುತಿಯ ಪಡೆಯುವಂತೆ ೧

ಚತುರವದನ ಸತಿಯ ಸಕಲ
ಶೃತಿಗಳಿಗಭಿಮಾನಿ ನಿಮ್ಮನು
ನುತಿಸಿ ಬೇಡುವೆ ರತಿಯ ಪತಿಯ ಪಿತನ
ಮಹಿಮೆ ತುತಿಸುವಂತೆ ೨

ಸರಸಿಜ ಭವನರಸಿ ನಿಮ್ಮನು ವರುಣಿಸಲೆನ್ನೊಶವೆ
ಜನನಿ ಶರಣು
ಜನರ ಪೊರಿಯುವ ಕಾರ್ಪರ
ಸಿರಿನರಹರಿಯ ಸೊಸೆಯೆ ೩

## ೨೧

ವಂದಿಪೆ ವಾಗ್ದೇವಿ ಭಾರತಿ ನೀಡೆನಗೆ ಸುಮತಿ
ನಂದಸುತನ ಪದದಿ ಕೊಡು ರತಿ ಪ

ವಂದಿಪೆ ವಾಗ್ದೇವಿಯನ್ನ ಮಂದಮತಿಯ
ಕಳೆದು ಮನದಿ–
ನಿಂದು ವಿದ್ಯೆಯ ನೀಡಿ ಎನಗಾನಂದ
ಗರಿಯೆ ಬಂದು ಬೇಗ ಅ.ಪ

ಇಂದು ಮೌಳಿ ಮುಖ್ಯ ಸುರಗಣ ವಂದಿತಳೆ ಎನ್ನ
ನಿಂದು ವದನದಲ್ಲಿ ಅನುದಿನ ನಂದ ಮುನಿಯ ಶಾಸ್ತ್ರವಚನ
ಛಂದದಿಂದ ಪಠಣ ಶ್ರವಣಾನಂದವಾಗುವಂದದಿ ಗುರು
ಗಂಧ ವಾಹನರಾಣಿ ನಿನಗೆ ೧

ಪೇಳಲಳವೆ ನಿಮ್ಮ ಮಹಿಮೆಯ ಕಾಲಭಿಮಾನಿ
ಕೇಳುವೆ ಸುಜ್ಞಾನ ಭಕುತಿಯ ಕಾಲಕಾಲಗಳಲ್ಲಿ ಎನ್ನ
ನಾಲಿಗೆಯೊಳ್ ನಿಂತು ಲಕ್ಷ್ಮೀಲೋಲನ ಶುಭ ಲೀಲೆಗಳನು
ಪಾಡಿ ಪೊಗಳುವಂತೆ ಜನನಿ ೨

ಚಾರು ಕೃಷ್ಣಾತೀರಸಂಸ್ಥಿತಾ ಉದಾರ ಚರಿತ
ನೀರಜಾಸನಾದಿಸುರನುತಾ ಶೇರಿದ ಭಕುತರಿಗೆ ತ್ರಿದಶ
ಭೂರುಹ ವೆಂದೆನಿಸಿದಂಥಾಪಾರ ಮಹಿಮ ಕಾರ್ಪರಸಿರಿ
ನಾರಸಿಂಹನ ಸೊಸೆಯೆ ನಿನಗೆ ೩

## ೨೨

ಪಾಹಿ ವಿನತಾತ್ಮಜ ಪತಗಾಧಿರಾಜಾ ಪ

ಪಾಹಿಮಾಂ ವೈದೇಹಿರಮಣಗೆ ವಾಹನತ್ವವ
ಪಡೆದ ಗರುಡನೆ ಅ.ಪ

ವಂದಿಸುವೆ ಅರವಿಂದನಾಭನ
ಶ್ಯಂದನೋತ್ತಮನೆನಿಸಿ ಜಗದೊಳು

ಅಂದು ಸುರಕೃತ ಸಿಂಧು ಮಥನದಿ ಮಂದರವ
ತಂದಿಟ್ಟ ಧೀರನೆ ೧

ಕಾಳಗದಿ ಕಪಿವೀರರಿಗೆ ಕೃತವ್ಯಾಳ
ಬಂಧವ ಬಿಡಿಸಿದಂಥ
ವಾಲಖಿಲ್ಯರ ವರವ ಪಡೆದ ವಿಶಾಲಮಹಿಮನೆ
ಕಾಲಿಗೆರಗುವೆ ೨

ಧರಣಿಯೊಳು ಬಹು ಶರಣು
ಜನರಘ ತರಿದಭೀಷ್ಟಿಯ
ಗರಿವ ಕಾರ್ಪರ ನರಹರಿಯಶುಭಚರಣ
ಪೆಗಲೊಳು ಧರಿಸಿರುವ ಸೌಪರ್ಣಿ ರಮಣನೆ ೩

## ೨೩

ಶೇಷದೇವನೆ ಪೋಷಿಸೆನ್ನನು
ಶೇಷದೇವಾ ಕರುಣಾ ಸಮುದ್ರಭವ ಪ

ಕ್ಲೇಶವ ಕಳಿಯೋ ಸುರೇಶ ಮುಖವಿನುತ ಅ.ಪ

ವಾಸುದೇವನ ಶಯ್ಯಾಸನ ರೂಪದಿ ಸೇವಿಸುವಿ ಚರಣ
ಸಾಸಿರವದನದಿ ಶ್ರೀಶನ ಶುಭಗುಣಲೇಶ ವರ್ಣಿಸುವ
ಭಾಸುರ ವಪುಷಾ ೧

ಹೇ ಮಹಾತ್ಮನೇ ಭೂಮಿ ಪಾತಾಳವ್ಯೋಮ
ವ್ಯಾಪ್ತನೆ ರಾಮನ ಸೇವಿಸಿ
ಪ್ರೇಮವ ಪಡೆದಿಹ ಸೌಮಿತ್ರಿಯ ಶುಭನಾಮದಿ ಮೆರೆದಾ ೨

ವಾರುಣೀವರ ಧಾರುಣಿಯೊಳು ಕೃಷ್ಣಾತೀರಕಾರ್ಪರ
ನಾರಸಿಂಹನ ಪದಾರವಿಂದಯುಗ ಸೇರಿಸುಖಿಸುತಿಹ
ಶೌರಿ ಅಗ್ರಜ ೩

## ೨೪

ಕರುಣಾದಿ ಪೊರೆಯನ್ನ ಪಾರ್ವತೀರಮಣ
ಪುರಹರನೆ ಕರುಣಿಪುದೆಮಗೆ ಸುಜ್ಞಾನ ಈ ಪ

ಧರಣಿಯೊಳು ಗೂಗಲ್ಲು ಕ್ಷೇತ್ರ ಸುಮಂದಿರನೆ ನಿನ್ನ
ಸ್ಮರಿಸುವೆನು ಅನುದಿನ ಅ.ಪ

ನಿರುತ ಸ್ಮರಿಪರ ದುರಿತ ಗಜ ಪಂಚಾಸ್ಯ ಕರಮುಗಿವೆ
ನೆರೆನಂಬಿನಿನ್ನನು ಶೇವಿಸುವ ಶರಣರಿಗೆ ಸುರತರುವೆ
ಜನಿಸಿರುವರೊಳು ಸರ್ವರಿಗೆ ಮನದಲಿ ಪ್ರೇರಿಸುವ ಗುರುವೆ
ಗೂಗಲ್ಲಪ್ರಭುವೆ ೧

ಕ್ಷಿತಿಪವರ ಪರಿಕ್ಷಿತಗೆ ಶ್ರುತಿ ಸಮ್ಮತವೆನಿಸಿದಂಥ
ಭಾಗವತಸು
ಕಥಾ ಮೃತವನುಣಿಸಿದ ಪರಮ ಪ್ರಖ್ಯಾತ
ತಿಳಿಸೆನ್ನ ಮನಕೆ
ತದರ್ಥಗಳ ಪೊಳೆವಂತೆ ಶುಭಚರಿತ
ಜಿತ ಮನೋಜಾತ ೨

ಅನುಗಾಲ ಭಕುತರ ಮ್ಯಾಳವನು
ಪರಿಪಾಲಿಸಲು ಶಿವನೆ ರಾಜಿಸುವ
ಕೃಷ್ಣಾಕೂಲದಲಿ ನಿಂದಿರುವಿ ಶಂಕರನೇ ಜನಮೇಜಯಾಖ್ಯ
ನೃಪಾಲಪೂಜಿತ ಪಾದ ಪಲ್ಲವನೇ
ಸುವಿಶಾಲ ಮಹಿಮನೇ ೩

ನಂದೀಶ ಗಮನನೆ ವಂದಿಸುವೆ ಇಂದ್ರಾದಿಸುರರೊಡೆಯ
ನೀಡಿದೆಯೊ ಗೌತುಮ
ರಂದ ಮಾಡಿದ ತಪಕೆ ಒಲಿದಭಯ
ಮನಮಂದಿರದಿ ಗೋ–
ವಿಂದನಂಘ್ರಿಯ ಕಾಂಬುವೊ ಬಗೆಯ ತೋರೆನಗೆ ಜೀಯ ೪

ಶ್ರೀಶ್ವೇತಗಿರಿ ಸುಕ್ಷೇತ್ರ ಪಂಚ ಕ್ರೋಶಗನು ನೀನೆ
ಸರ್ವೇಶ ಕಾರ್ಪರ ವಾಸಸಿರಿ ನರಕೇಸರಿಗೆ ಪ್ರಿಯನೇ
ದುರ್ವಿಷಯದಲಿ ಅಭಿಲಾಷೆ ಪುಟ್ಟಿಸದಂತೆ ಶಶಿಧರನೆ
ಸಿರಿವ್ಯಾಸಕುವರನೇ ೫

## ೨೫

ಚರಣ ಕಮಲ ಭಜಿಸೋ ಮೈಲಾರ ಲಿಂಗನ ಪ

ಪುರಹರ ಸ್ವರೂಪನೆ ಎಂದು ಧ್ಯಾನಿಸೋ
ಸ್ಮರಿಸುವರ ಪಾತಕ ತಿಮಿರ ಭಾಸ್ಕರನೆಂದು ನೀ
ಸ್ಮರಿಸೋ ಶಿರಬಾಗಿ ನಮಿಸೋ ಅ.ಪ

ತುರಗವಾಹನವೇರಿ ಬರುತಿಹನ
ಧರೆಯೊಳಗೆ ಮೈಲಾಪುರ ಸುಮಂದಿರನೆಂದು
ಕರೆಸುವನಾ ಹೊನಕೆರೆಯ ಜಲದಭಿಷೇಕದಿಂದ
ರ್ಚನೆಯ ಕೊಂಬುವನ ಶರಣರನ ಪೊರೆವನ ೧

ಕಾಲಕಾಲದಿ ಪಾಲಕಿಯ ಉತ್ಸವದಿ ಮೆರೆಯುವನ ಅನು
ಗಾಲಭಕುತರ ಮ್ಯಾಳವನು ಪಾಲಿಸಲು ಬಂದಿಹನ
ಕೇಳಿ ದ್ವರಗಳ ಕೊಡುವ ಘನ ತ್ರಿಶೂಲ ಧರಿಸಿಹನ
ಮಾಳಸಾಕಾಂತನ ೨

ನಿಷ್ಠೆಯಿಂದಲಿ ಭಜಿಪ ಭಕುತರನ
ರಕ್ಷಿಸಲು ಕೊಪ್ಪರ ಕಟ್ಟೆಯಲಿ ಸೇವೆಯನ್ನು ಕೊಳುತಿಹನ
ಸಿರಿ ವಿಷ್ಣು ಭಕುತರ ಮನೆಗಳಲಿ ಪೂಜೆಯನು ಕೊಂಬುವನ
ಇಷ್ಟ ಪ್ರದಾತನ ೩

ಸಂಚರಿಸುತಲಿ ದಿನಕರನು ಮಕರದಿ ಬರಲು
ಸಂಕ್ರಮಣ ಉತ್ಸವದಿ ನೋಡಲು ನೆರೆದ ಬಹು ಜನ
ರಿಂದ ಸೇವಿತನ ಗಿರಿಶಿಖರ ಗುಂಡಿನ ಮೇಲೆ ದೀಪೋತ್ಸವದಿ
ರಾಜಿತನ ಮಹಿಮಾನ್ವಿತನ ೪

ವಾರಿಜಾಸನ ವಿನುತ ಶುಭಚರಣ ಸರೋಜ ಕಾರ್ಪರ
ನಾರಸಿಂಹನ ಒಲಿಮೆ ಪಡೆ ದಿಹನಾ ರವಿವಾರ ವಾರದಿ
ವಾದ್ಯ ವಿಭವದಿ ಶೇವೆ ಕೊಳುತಿಹನಾ
ಮಾರ್ತಾಂಡದೇವನ ೫

## ೨೬

ಬಾರೆ ಗೌರಿ ಪೂಜಿಸುವೆನು ಸಾರಸಾಂಬಕಿ
ಸಾರುವೆ ಸಂಸಾರದಿ ಸುಖದೋರೆ ವಿಧುಮುಖಿ ಪ

ಕುಂದ ಮಲ್ಲಿಗೆ ಜಾಜಿ ಕುಸುಮ ಗಂಧ ಪರಿಮಳ
ಚಂದದಿ ಸಮರ್ಪಿಸುವೆನು ಪುಷ್ಪಫಲಗಳ ೧

ಮಂಗಳೆಂದು ಪಾಡುತ ಬೆಳಗುವೆನು ಆರುತಿ
ಮಂಗಳಗೌರಿಯೆ ಕೊಡು ಸೌಭಾಗ್ಯ ಸಂತತಿ ೨

ಮಂಗಳ ಪ್ರದಾತೆ ಗಿರಿಸಂಭೂತೆ ಸುರನುತೆ
ಮಂಗಳಾಂಗಿ ಕುರು ಕರುಣಾಮಯಿ ನಮೋಸ್ತುತೆ ೩

ಪತ್ಯಂತರ್ಗತ ಹರಿಯಸೇವೆ ನಿತ್ಯ ಮಾಡಿಸೆ
ಪುತ್ರ ಪೌತ್ರಾದಿ ಸಂಪದವಿತ್ತು ರಕ್ಷಿಸೆ ೪

ರತಿಯ ಪತಿಯ ಪಿತಗೆ ಸದಾಪ್ರತಿಮೆಯೆನಿಸುವ
ಅತಿಥಿಗಳನು ಸೇವಿಸುವ ಸುಮತಿಯ ಕೊಡು ಜವ ೫

ಸಡಗರದಿ ನಿಮ್ಮಡಿಯ ಶೇವೆ ಬಿಡುದೆ ಮಾಡುವೆ
ಮೃಡನ ರಾಣಿ ಕೊಡುವರಗಳ ಗಡನೆ ಬೇಡುವೆ ೬

ಶರಣು ಜನರ ಪೊರೆವ ಕಾರ್ಪರ ನಾರಸಿಂಹನ
ಚರಣ ಕಮಲಯುಗದಿ ಭಕುತಿ ಇರಲಿ ಅನುದಿನಾ ೭

# ವ್ಯಾಸಕೂಟ–ದಾಸಕೂಟದ ಇತರ ಗುರುಗಳ ವರ್ಣನೆ

## ೨೭

ಮುನಿವರ್ಯ ಶ್ರೀಕಾರ್ಪರ ಮುನಿವರ್ಯ ಪ

ಮುನಿವರ್ಯ ಕಾಯಬೇಕೆನ್ನ ಮಧ್ವಮುನಿಕೃತ
ಗ್ರಂಥಾರ್ಥ ಜ್ಞಾನ
ಕೊಟ್ಟು ಕನಸಿನೊಳಾದರು ವನಿತಾದಿ
ವಿಷಯವ ನೆನೆಸದಂದದಿ
ಮಾಡೋ ವನಜನಾಭನ ಪ್ರೀಯ ಅ.ಪ

ಮುನಿವರ್ಯ ಮನವಾಚಾಕಾಯಾ ದಿಂದ
ಅನುದಿನ ನಡೆಯುವ ಕ್ರಿಯಾ ಶ್ರೀ
ಕೃಷ್ಣನೆ ಮಾಡಿಸುವನೆಂಬೊ ಮತಿಯಾ ಕೊಡು
ಯನಗೆಂದು ಮುಗಿವೆನು ಕೈಯಾ ಆಹಾ
ಮನಸಿಜನಯ್ಯನ ಗುಣಕಥನದಿ ಭವ ವನಧಿ
ದಾಟಿಸುವ ಸಜ್ಜನರ ಸಂಗವ ಕೊಡು ೧

ಹಿಂದಕ್ಕೆ ನೀ ಮಾಡಿದಂಥ ತಪದಿಂದ
ಶ್ರೀಕಾಂತನಶ್ವತ್ಥ ರೂಪ
ದಿಂದ ಒಲಿದು ಬಂದು ನಿಂತು ಭಕ್ತ
ವೃಂದವ ಪಾಲಿಪ ನಿರುತ ಆಹ
ಇಂದುಮೌಲಿ ಮುಖರಿಂದ ಸಹಿತನಾಗಿ
ಮಂದ ಜಾಸನನಿಲ್ಲಿ ಬಂದು ಪೂಜಿಪನಿತ್ಯ ೨

ಪರಮಪಾವನ ಕೃಷ್ಣಾತೀರದಲ್ಲಿ ಮೆರೆವ
ಶ್ರೀ ಕಾರ್ಪರಾಗಾರ

ಬಹುಶರಣು ಜನರಿಗೆ ಮಂದಾರ
ನರಹರಿಯನೊಲಿಸಿದಂಥ ಧೀರಾ ಆಹಾ
ಕರುಣ ಶರಧೆಯನ್ನ ದುರಿತಗಳೋಡಿಸಿ
ಹರಿಗುರು ಚರಣದಿ ಪರಮಭಕ್ತಿಯ ಕೊಡೊ ೩

## ೨೮

ಪದ್ಮನಾಭರ ಭಜಿಸೋ ಹೇ ಮನುಜಾನೀ ಪ

ಮಧ್ವರಾಯರ ಕರಪದ್ಮ ಸಂಭವರಾದ ಅ.ಪ

ಮತ್ತ ಮಾಯಿಗಳೆಂಬೊ ಹಸ್ತಿಗಣಕೆ ಪಂಚ
ವಕ್ತ್ರರೆಂದೆನಿಸಿದ ಪೃಥ್ವೀಸುರಸೇವಿತ ೧

ಪ್ರೀತಿಯಿಂದಲಿ ಗೋಪಿನಾಥನರ್ಚಿಸಿ ಸುಖ
ತೀರ್ಥ ಗ್ರಂಥಕೆ ಸವ್ಯಾಖ್ಯಾತ್ರರೆಂದೆನಿಸಿದ ೨

ಧರೆಯೊಳು ಶರಣರ ಪೊರಿವ ಕಾರ್ಪರನರ
ಹರಿಯನೊಲಿಸಿದಂಥ ಪರಮ ಮಹಿಮರಾದ ೩

## ೨೯

ನರಹರಿ ತೀರ್ಥಯತಿವರ್ಯ ಇಷ್ಟೆಂದೊ
ರ್ಣಿಸಲೊಶವೆ ನಿಮ್ಮಯ ದಿವ್ಯ ಚರಿಯ ಪ

ಸುರವಿನುತ ಪದಹರುಷತೀರ್ಥರ
ಕರಕಮಲ ಸಂಜಾತರೆನಿಸುತ
ಧರೆಯೊಳಗೆ ಸಿರಿಸಹಿತರಾ ಮನ
ಕರೆದು ಧರೆಸುರ ಜನಕೆ ತೋರಿದ ಅ.ಪ

ಚರಿಸುತ ಬರಲು ಗಜಪುರದಿ ಪುರ-
ದರಸನಿಲ್ಲದಿರೆ ಯೋಚಿಸುತ ಕರಿಕರದಿ
ವರಮಾಲಿಕೆಯ ಕೊಡಲಾಕ್ಷಣದೀ ಯತಿ
ವರರ ಕಂಠದಲಿ ಹಾಕಲು ಜನ ಸಭದಿ
ಪುರಜನದ ಪ್ರಾರ್ಥನದಿ ದ್ವಾದಶ ವರುಷ
ಪ್ರಜರನು ಪೊರೆದು ಕೋಶದೊಳಿ-
ರುವ ಧರಿಜಾಸಹಿತ ರಾಮನ ತರಿಸಿ
ಪೊರಟರು ಕುದುರೆಯೇರುತ ೧

ಆ ಮಹಾಮುನಿಪರು ತ್ವರದಿ ಬಂದು
ಶ್ರೀ ಮದಾನಂದ ತೀರ್ಥರ ಪದಯುಗದಿ
ಪ್ರೇಮವಂದನ ಪೂರ್ವಕದಿ ಸೀತಾ
ರಾಮಮೂರ್ತಿಯ ನೊಪ್ಪಿಸಿದರು ಕರದೀ
ಶ್ರೀ ಮನೋಹರ ನಂಘ್ರಿಯುಗಲವ
ಪ್ರೇಮದಿಂದಲಿ ಪೂಜಿಸುತಲಿರೆ
ಈ ಮಹಾತ್ಮರ ಕರೆದು ಕೊಟ್ಟರು
ನೇಮದಿಂದರ್ಚಿಸಿರಿ ಎನುತಲಿ ೨

ಭಾಸುರ ಹೇಮಮಂಟಪದಿ ನಿತ್ಯಾ
ಶ್ರೀಸೀತಾರಾಮನರ್ಚಿಪರು ವೈಭವದೀ
ಭೂಸುರ ಕೃತ ವೇದಘೋಷದಿ ಮತ್ತೆ
ವ್ಯಾಸಸೂತ್ರಗಳ ನಾಮಾವಳಿ ಪಠಣ ದಿ
ದೇಶ ದೇಶಗಳಲ್ಲಿ ಚರಿಸುತ
ತೋಷತೀರ್ಥರ ಮತವ ಬೋಧಿಸಿ
ಶ್ರೀಶಕಾರ್ಪರ ವಾಸ ಸಿರಿ ನರ
ಕೇಸರಿಗೆ ಪ್ರಿಯದಾಸರೆನಿಸಿದ ೩

## ೩೦

ಪಾದ ಪದುಮವ ಭಜಿಸೋ ಮಾಧವ ತೀರ್ಥರ ಪ

ಮೇದಿನಿಯೊಳು ನಾಲ್ಕು ವೇದಗಳಿಗೆ ಭಾಷ್ಯ
ಸಾದರದಲಿ ರಚಿಸಿದ ಮೋದತೀರ್ಥರ ಸುತರ ೧

ಸೂರಿಜನರ ಪರಿವಾರ ಸೇವೆಯ ಕೊಳುತ
ಧಾರುಣಿಯೊಳಗೆ ಮಣೂರು ಪುರದಲಿ ಮೆರೆವರ ೨

ವೀಶಗಮನ ಚನ್ನಕೇಶವಾತ್ಮಕನಾದ
ಶ್ರೀಶ ಕಾರ್ಪರ ನರಕೇಸರಿಯನೊಲಿಸಿದವರ ೩

## ೩೧

ಶ್ರೀಮದಕ್ಷೋಭ್ಯ ತೀರ್ಥರ ದಿವ್ಯ ಚರಿತಂ
ಕಾಮಿತ ಪ್ರದವಹುದು ಶೃಣ್ವತಾಂ ಸತತಂ ಪ
ಈ ಮಹಿಯೊಳವತರಿಸಿ ಭೂಮಿಜಾಸಹಿತ ಶ್ರೀ
ರಾಮನಂಘ್ರಿದ್ವಯವ ಪೂಜಿಸುತಲಿ
ಭೂಮಿ ನಿರ್ಜರ ಜನಸ್ತೋಮ ವಂದಿತರಾಗಿ
ವ್ಯೋಮ ಕೇಶಾಂಶರೆಂದೆನಿಸಿ ಮೆರೆವಂಥ ೧

ಮೋದತೀರ್ಥರ ಮತ ಮಹೋದಧಿಗೆ ಪೂರ್ಣಹಿಮ
ದೀದಿತಿಯರೆಂದೆನಿಸಿ ದಿಗ್ವಲಯದಿ
ಭೇದ ಬೋಧಕ ಸೂತ್ರವಾದದಿಂದಲಿ ಮಹಾ
ವಾದಿ ವಿದ್ಯಾರಣ್ಯ ಯತಿವರನ ಜಯಿಸಿದ ೨

ವಿಟ್ಠಲನ ಪದಪದುಮ ಷಟ್ಪದರೆಂದೆನಿಸಿ
ಸ್ವಪ್ನಸೂಚಿತ ಚಂದ್ರಭಾಗತಟದಿ

ಶ್ರೇಷ್ಠ ಕುದುರೆಯನೇರಿ ನದಿಯ ಜಲಕುಡಿದವರ
ಇಷ್ಟರೆನ್ನುತ ಕರೆದು ಕೊಟ್ಟರಾಶ್ರಮವ ೩

ಸೃಷ್ಟಿಯೊಳು ಮಧ್ವಮತ ಪುಷ್ಟಿಗೈಸುವರೆಂಬ
ದೃಷ್ಟಿಯಿಂದಿವರಿಗೆ ಸುಮುಹೂರ್ತದಿ
ಪಟ್ಟಗಟ್ಟಿದರು ಜಯತೀರ್ಥ ನಾಮವನಿಡುತ
ಕೊಟ್ಟರಾಜ್ಞೆಯನು ದಿಗ್ವಿಜಯ ಮಾಡಿರಿ ಎಂದು ೪

ದೇಶದೇಶದಿ ಬರುವ ಭೂಸುರೋತ್ತಮರ ಅಭಿ
ಲಾಷೆಗಳನೆಲ್ಲ ಪೂರೈಸಿ ಪೊರೆವ
ಶ್ರೀಶಕಾರ್ಪರ ಕ್ಷೇತ್ರವಾಸ ಅಶ್ವತ್ಥನರ
ಕೇಸರಿಯ ನೊಲಿಸಿದ ಯತೀಶರಿವರೆಂದು ೫

## ೩೨

ರಥವೇರಿ ಬರುತಿಹ ಗುರುವರನ್ಯಾರೆ ಪೇಳಮ್ಮಯ್ಯಾ ಪ

ಕ್ಷಿತಿಯೊಳು ಮುದಮುನಿಕೃತ ಗ್ರಂಥಕೆ ವಿಶ್ರುತ
ಟೀಕಾಕೃಧ್ಯ ತಿವರನಮ್ಮ ಅ.ಪ
ಕ್ಷಿತಿಯೊಳು ರತಿಪತಿಪಿತನಾಜ್ಞೆಯ
ಸ್ವೀಕರಿಸಿ ಮಾರುತನವತರಿಸಿ
ಶೃತಿಸಮ್ಮತ ಶ್ರೀಮಧ್ಭಾಷ್ಯವತಾರಚಿಸಿ ಛಾತ್ರರಿಗೆ ವಿವರಿಸೆ
ಸ್ತುತಿಸುತಿಹರು ಫಣಿಪತಿ ಮುಖ ಸುರರಾಗಸದಿ
ಕೇಳುತಲನುದಿನದಿ
ಅತಿಹಿತದಲಿ ಗೋಪತಿ ರೂಪದಿ ಕೇಳ್ದತುಲ
ಮಹಿಮ ಸುರಪತಿಯು ಕಾಣಮ್ಮ ೧

ಚಾರು ತುರಂಗಮವೇರಿ ನಡೆಸಲತಿ ಚತುರ
ದೇಶಪಾಂಡ್ಯರಕುವರ

ವಾರಿಮಧ್ಯ ಹಯವೇರಿ ಮಾಡಲು ಜಲಪಾನ
ಕೇಳಲು ಗುರುವಚನ
ಮೀರಗೊಡದೆ ತಲೆ ದೋರಿತಾಗಲೆ ಸುಜ್ಞಾನ
ಸಂಸಾರ ಸುಖವನ
ದೂರಮಾಡಿ ಯತಿಸೂರಿ ಅಕ್ಷೋಭ್ಯ ಕುಮಾರರೆನಿಪ
ಜಯ ತೀರಥರಮ್ಮ ೨

ಮಧ್ವಶಾಸ್ತ್ರ ವಿಜಯ ಧ್ವಜಯಾಪವ ಜಗದಿ
ಸ್ಥಾಪಿಸಿದರು ಮುದದಿ
ಶುದ್ಧಮಾಯಿ ಸುಭಟಧ್ವಜನಿಯ ಓಡಿಸಿದ ವಾಕ್ಸಾಯಕದಿಂದ
ಮಧ್ವರಾಜಕೃತ ಸದ್ಗ್ರಂಥಗಳ ವಿಸ್ತಾರ ಮಾಡಿದ ಯತಿಧೀರಾ
ವಿದ್ಯಾರಣ್ಯಾಖ್ಯಾದ್ವೈತಿಯ ವಾಗ್ಯುದ್ಧದಿ
ಗೆಲಿದ ಪ್ರಸಿದ್ಧ ಕಾಣಮ್ಮ ೩

ಚಾಮೀಕರಕೃತ ಚಾಮರ ಛತ್ರಗಳಿಂದ ಸೇವಿಪದ್ವಿಜರಿಂದ
ನೇಮದಿ ಪಠಿಸುವ ಸಾಮದಿ ಶೃತಿ ಘೋಷ
ಶ್ರವಣಕೆ ಪೀಯೂಷ
ಭೂಮಿಸುರರಿಗತಿ ಪ್ರೇಮದಿ ಸುಧೆಯನುಣಿಸಿದ
ಭವಬಾಧೆ ಬಿಡಿಸಿದ
ಭೂಮಿಜಾವರ ಶ್ರೀರಾಮ ಪದಾರ್ಚಕ
ಶ್ರೀಮಳಖೇಡ ಸುಧಾಮ ಕಣಮ್ಮ ೪

ನಿರುತ ಶಿಷ್ಯರಿಗೆ ಮರುತಶಾಸ್ತ್ರ ಬೋಧಿಪರ
ತೋಷಿತ ಬುಧನಿಕರ
ಗುರುಸತ್ಯ ಪ್ರಮೋದತೀರ್ಥ ಸಂಸೇವ್ಯ
ಪಾವನತರಚರಿಯ ಶರಣುಜನಕೆ
ಸುರತರುವೆನಿಸಿದ ಜಯರಾಯಾ ವಿದ್ವಜ್ಜನಗೇಯಾ ಧರೆಯೊಳು
ಸಿರಿಕಾರ್ಪರ ನರಸಿಂಹನೆ ಪರನೆಂದರುಹಿದ ಗುರುವರನಮ್ಮ ೫

## ೩೩

ಶ್ರೀ ಮದ್ರಾಮ ಪದಾರ್ಚಕ ನಿರ್ಜಿತ ಕಾಮಸುಗುಣ
ಧಾಮ ನಮೋ
ಮಾಮವನತ ಜನಕಾಮಿತ ಫಲದ
ಜಿತಾಮಿತ್ರಾಖ್ಯ ಮುನೀಂದ್ರ ನಮೋ ೧

ನಂದತೀರ್ಥ ವಂಶೋದ್ಭವಗುರು
ವಿಭುದೇಂದ್ರಕುಮಾರ ಯತೀಂದ್ರ ನಮೋ
ಇಂದು ಮೌಳಿ ಭೂವೃಂದಾರಕ ಭವಬಂಧ
ವಿಮೋಚಕ ನಮೋ ನಮೋ ೨

ಭೂತನಾಥ ಪುರುಹೂತ ಮುಖಸುರ ವ್ರಾತ
ವಿನುತತೇ ನಮೋನಮೋ
ವಾತಮತಾಂಬುಧಿ ಶೀತಕಿರಣ ಪ್ರಖ್ಯಾತ
ಜಿತಾಹಿತ ಪಾಲಯಮಾಂ ೩

ಶರಣಾಗತ ಜನ ದುರಿತ ತಿಮಿರ ಭಾಸ್ಕರ
ಕರುಣಾಕರ ನಮೋ
ಸಪ್ತವಾಸರ ಮುಷಿತ್ವಾಭೋ ಪುನರುತ್ಥಿತ
ಪರಮ ಸಮರ್ಥನಮೋ ೪

ಅನಮಿಷೆ ಕೃಷ್ಣಾವೇಣಿ ತಟಸ್ಥಿತ ಗೋನದ
ತರು ಸುಸ್ಥಾನಗತ
ಆನತಜನ ಸುರಧೇನುಸಮಾನ ಮಹಾನುಭಾವತೇ
ನಮೋನಮೋ ೫

ಶ್ರೀ ಮತ್ಕಾರ್ಪರಧಾಮ ನರಹರೇ ಪ್ರೇಮ
ಪಾತ್ರ ಸುಚರಿತ್ರ ನಮೋ

ಕಾಮಾದಿ ರಿಪುಸ್ತೋಮ ಭಯಾಪಹ
ಮಾಮುದ್ಧರತೆ ನಮೋನಮೋ ೬

## ೩೪

ಶ್ರೀಪಾದರಾಜ ಪಾಲಿಸೊ ಕೈಪಿಡಿದೀ ಭವದ
ಕೂಪಾರದಿಂದ ದಾಟಿಸೋ ಪ

ಕಾಪಾಡೆಲೊ ಕರುಣಾ ಪಯೋನಿಧೆ ಭೂಪಚಂದ್ರ ಗಿರಿ
ಪಾಪಗಳನ್ನು ಕಳದಿರುವೆ ಮದ್ಗುರುವೆ ಕರಮುಗಿವೆ
ಭಜಕರ ಸುರತರುವೇ ಅ.ಪ

ಮೇದಿನಿ ಪಾಲಪೂಜಿತ ವಿದ್ವಜ್ಜನವಿನುತ
ಮೇದಿನಿ ಜಾತ ಪ್ರದಾತ
ಮೋದಮುನಿಯ ಸುಮತೋದಧಿಚಂದಿರ
ವಾದಿ ಮದಗಜ ಮೃಗಾಧಿಪ ಕವಿಜನಗೇಯ ಶುಭ
ಕಾಯ ಧೃವರಾಯ ಆಶ್ಚರ್ಯ ಚರ್ಯ ೧
ವಿಪ್ರಹತ್ಯಾದಿ ದೋಷಗಳನ್ನು ಕಳೆಯುವ ಮಹಿಮೆಯನು
ಅಪ್ರಬುದ್ಧರು ದೂಷಿಸೆನಿಮ್ಮನ್ನು
ಕ್ಷಿಪ್ರ ಶಂಖೋದಕ ಸಂಪ್ರೋಕ್ಷಿಸಿ ಬಲು ಕಪ್ಪುವಸನವನು
ಸುಪ್ರಕಾಶಿಸಿದ ಮಹಿಮಾ ಶುಭನಾಮ ಜಿತಕಾಮಾ
ಯತಿ ಸಾರ್ವಭೌಮ ೨

ಕ್ಷೇತ್ರ ಕಾರ್ಪರದಲಿ ಶ್ರೀ ರಘುನಾಥ
ವಿಭುದೇಂದ್ರ ಸಹಿತ
ಛಾತ್ರಾ ನಿಮ್ಮನ್ನು ಕೇಳಲು ಸೂ–
ತ್ರಾರ್ಥಾ ಚಾತುರ್ಮಾಸದಿ ಕೂತಿರೆತವ
ಸರ್ವಾತಿಶಯದಿಸ–

ಶ್ಯಾಸ್ತ್ರ ಪ್ರವಚನ ಸುಪ್ರೀತಾ ರಘುನಾಥಾ
ಮುಖಗೀತಾನಾಮದಿ ಪ್ರಖ್ಯಾತ ೩

ಎಷ್ಟು ನಿಮ್ಮಂಘ್ರಿಸ್ಮರಣೆಯ ಮಾಡುವರಿಗೆ ನಿತ್ಯಾ
ಮೃಷ್ಟಾನ್ನ ಕೊಡುವೊ ಮಹಿಮೆಯ ಕೃಷ್ಣಗರ್ಪಿಸಿದ
ಪಷ್ಠಿಶಾಕಯುತ ಮೃಷ್ಟಾನ್ನ ದ್ವಿಜ
ತುಷ್ಟಿಗೈಸುವಿರಿ ನಿರುತ ಗುಣಭರಿತ ಪ್ರಖ್ಯಾತ
ಪಾವನ ತರ ಚರಿತ ೪

ನಿರುತ ನಿಮ್ಮನ್ನು ಸ್ಮರಿಸುವ ನರಧನ್ಯ
ಜಗದೊಳು ಸನ್ಮಾನ್ಯ
ಚರಿಸಿ ಸತ್ಕರ್ಮವ ಘಳಿಸುವ ಪುಣ್ಯ
ಶರಣುಜನಕೆ ಸುರತರುವೆಂದೆನಿಸುತ ಧರೆಯೊಳು
ಮೆರೆಯುವ ಶಿರಿಕಾರ್ಪರ ಶುಭನಿಲಯ ಸುರಗೇಯ
ಗುರುರಾಯ ನರಹರಿಗತಿ ಪ್ರೀಯ ೫

## ೩೫

ವಂದನೆ ಮಾಡಿರೈ ವ್ಯಾಸ ಮುನೀಂದ್ರರ ಪಾಡಿರೈ ಪ

ವಂದಿಸುವರ ಭವಬಂಧವ ಬಿಡಿಸಿ ಆ
ನಂದವ ಕೊಡುವ ಕರ್ಮಂದಿವರೇಣ್ಯರ ಅ.ಪ

ನಂದತೀರ್ಥಮತ ಸಿಂಧುವಿಗೆ ಪೂರ್ಣಚಂದ್ರಾ
ಸದ್ಗುಣ ಸಾಂದ್ರಾ
ಚಂದ್ರಿಕಾದಿ ಪ್ರಬಂಧತ್ರಯ ನಿರ್ಮಿಸಿದಾ ಮತವರ್ಧಿಸಿದಾ
ನಂದದಿಂದ ಮುಚಕುಂದ ವರದನರ್ಚಿಸಿದಾ ಸತಿ ಮೆಚ್ಚಿಸಿದಾ
ಹಿಂದಕೆ ಹರಿಯನು ಸ್ತಂಭದಿ ತೋರಿದ ಕಂದ ಪ್ರಹ್ಲಾದರೆ
ಬಂದಿಹರೆನ್ನುತ ೧

ಕೃಷ್ಣರಾಯನಿಗೆ ದುಷ್ಟಯೋಗ ಪರಿಹರಿಸಿ ರಾಜ್ಯವಹಿಸಿ ಯ–
ಥೇಷ್ಟ ದಾನಫಲಕೊಟ್ಟು ನೃಪನನುಗ್ರಹಿಸಿ ರಾಜ್ಯದೊಳಿರಿಸಿ
ಶ್ರೇಷ್ಠವಾದ ಸಿಂಹಾಸನದಲಿ ಕುಳ್ಳಿರಿಸಿ ಆಜ್ಞೆಯ ತಿಳಿಸಿ
ಎಷ್ಟು ಮಹಿಮರೆಂದರಿತು ಇವರ ಮನ ಮುಟ್ಟಿ ಭಜಿಪರಿಗ
ಭೀಷ್ಟೆಯಗರಿವರ ೨

ಧರೆಯೊಳು ಚರಿಸುತ ಪರಮತತಿಮಿರಕೆ
ಸೂರ್ಯಯತಿ ಕುಲ–
ವರ್ಯ ಗುರುಮಧ್ವಮ ತದಿಸದ್ವೈಷ್ಣವ ಕುಮುದಕೆ
ಭಾರ್ಯಾ ಪಾವನ ಚರ್ಯ ಪರಮಮಹಿಮ ಬ್ರಹ್ಮಣ್ಯ–
ತೀರ್ಥರಿಗೆ ತನಯಾ ಕವಿಜನಗೇಯಾ ಶರಣರ ಪೊರಿಯುವ
ಶಿರಿಕಾರ್ಪರನರಹರಿಯ ನೊಲಿಸಿರುವ ಪರಮ ಮಹಾತ್ಮರ ೩

## ೩೬

ವಾದಿರಾಜ ಗುರುವೇ ಪಾದಾರಾಧಕ ಸುರತರುವೆ ಪ

ಮೋದವ ಕೊಡುವದು ನೀ ದಯದಿಂದಲಿ
ಸ್ವಾದಿನಿಲಯ ತವ ಪಾದಕೆ ನಮಿಸುವೆ ಅ.ಪ

ಮೇದಿನಿಯೊಳು ಚರಿಸೀ ಜನರೊಳಗಾಧ ಮಹಿಮರೆನಿಸಿ
ಮೋದಮುನಿಯ ಸುಮತೋದಧಿಚಂದಿರ
ವಾದಿ ಮದ ಗಜ ಮೃಗಾಧಿಪರೆನಿಸಿದ ೧

ಯುಕ್ತಿ ಮಲ್ಲಿಕಾಧೀ ಬಹುಸರಸೋಕ್ತಿ ಸಹಿತವಾಗಿ
ಭಕ್ತಿ ಪುಟ್ಟಿಸುವ ರುಕ್ಮಿಣೇಶ ವಿಜಯಾಖ್ಯ ಗ್ರಂಥದಿ ಚಮ
ತ್ಕೃತಿ ತೋರಿದ ೨

ಭಾಗವತರ ಪ್ರೀಯಾ ನಮಿಸುವೆ ವಾಗೀಶರ ತನಯಾ
ಯೋಗಿವರ್ಯ ಕವಿಗೇಯ ದಯಾಕರ
ಭೋಗಪುರೀಶನ ರೋಗವ ಕಳೆದಿ ೩

ರಾಜರನ್ನು ಪೊರೆದಿ ಯತಿಕುಲರಾಜರೆನಿಸಿ ಮೆರೆದಿ
ವಾಜಿಪದನ ಪದ ರಾಜೀವ ಯುಗಲ ಪೂಜಿಸಿ ಜಗದಿವಿ
ರಾಜಿಸಿದಂಥ ೪

ಭೂತಭಯವ ಬಿಡಿಸಿ ಭಜಕರ ಪಾತಕ ಪರಿಹರಿಸಿ
ಖ್ಯಾತ ಕಾರ್ಪರ ಕ್ಷೇತ್ರದಿ ನರಮೃಗ ನಾಥನ ಪರಮ
ಪ್ರೀತಿಯ ಪಡೆದಿ ೫

## ೩೭

ನೆರೆನಂಬಿದವನೆ ಧನ್ಯಾ ಈ ಗುರುಪದ ಪ

ನೆರೆನಂಬಿದವ ರಘುತರಿವ ವೇದವ್ಯಾಸ ಕರ
ಸರೋರುಹ ಜಾತ ಗುರು ವೇದೇಶರ ಪಾದ ಅ.ಪ

ವರಮಣಿಯೊಳು ಶಿರಿತನದಿಂದಲ್ಲಿ ಮೆರೆವ ನಾಯ
ಕರ ಮಂದಿರದಿ ಜಾತರಾಗಿ ಪರಮ ಮಹಿಮರಾದ
ಗುರು ರಘೋತ್ತಮರಿಂದ ಪರವಿದ್ಯೆಯನು ಪೊಂದಿ
ಚರಿಸಿ ದಿಗಂತದಿ ವರವೇದ ವ್ಯಾಸರಿಂದ ತುರಿಯಾಶ್ರಮ
ಪಡೆದು ಸಚ್ಛಿಷ್ಯರಿಂದ ಸಂತತ ಪ್ರವಚನ ಮಾಡುತಲಿ
ಆನಂದ ತೀರ್ಥರ ಮತ ಶರಧಿಗೆ ಪೂರ್ಣ.ಚಂದಿರನೆನಿ
ಪರ ಪದ ೧

ಬಾದರಾಯಣನ ಪ್ರಸಾದವ ಪಡೆದಂಥ
ಯಾದವಾರ್ಯರಿಗೆ

ಮೋದತೀರ್ಥ ರಮತ ಬೋಧಿಸಿದಂಥ
ಅಗಾಧ ಮಹಿಮರು ಈ
ಮೇದಿನಿಯೊಳಗಲ್ಪ ಭೋಧ ಜನಕೆ
ಪೂರ್ಣಬೋಧ ಗ್ರಂಥಾರ್ಥ
ಸುಬೋಧವಾಗಲೆಂದು ವೇದಾರ್ಥ
ಗ್ರಂಥಗಳನ್ನು ಟೀಕಾ ಕೃ
ತ್ಪಾದರುಕ್ತಿಗಳನು ಸ್ಮರಿಸಿ ಪದಾರ್ಥ
ಕೌಮುದಿಗಳನು ರಚಿಸಿದಂಥಾ
ವಾದಿ ಮಾತಂಗ ಮೃಗಾಧಿಪರನ್ನು ೨

ವರ ಕುಸುಮೂರ್ತಿಯೊಳು ಇರುತಿರಲೊಂದಿನ
ಕರೆದು ಶಿಷ್ಯರಿಗೆ
ಮರುತಶಾಸ್ತ್ರದ ಮರ್ಮ ಅರಹುವ ಸಮಯದಿ
ಹರಿ ಪಾದಂಗುಟದಿಂದ
ಪೊರಟು ಜಗವನೆಲ್ಲ ಪರಮ ಪಾವನಮಾಳ್ಪ
ಸುರನದಿಯನು ಸಾಕ್ಷಾ–
ತ್ಕರಿಸಿ ತೋರಿಸಿದಂಥ ಗುರು ಕೃಷ್ಣದ್ವೈಪಾಯನ ತೀರ್ಥರಿಗೆ
ಗುರುವೆನಿಸಿದ ಕಾರಣ ವರ್ಣಿಸಲೆಂತು
ಘನವಾದ ಮಹಿಮೆಯನಾ
ಸೇವಿಸುವಂಥ ಶರಣ ಜನರ ಸುರತರು ಸಮ ಚರಣ ೩

ಒಂದೆ ಮನದಿ ಬಲು ಸುಂದರವಾದ ಈ
ವೃಂದಾವನದೆಡೆ ಒಂದು ಪ್ರದಕ್ಷಿಣಿ
ವಂದನೆ ಮಾಡಲು ಮಂದನಾದರು ಪ್ರಾಜ್ಞನೆಂದು ಕರೆಸುವನು
ವಂಧ್ಯೆಯಾದರು ಬಹುಕಂದರ ಪಡೆವಳುಸಂದೇಹವ್ಯಾಕಿಲ್ಲಿ
ಬಂದು ಸೇವಿಸುವವರ ಸಂಸೃತಿಯ ಬಂಧನವನು
ದೂರಮಾಡುತಲಿ ಆ
ನಂದವ ಗರಿಯುವರ ಭಕ್ತರ ದುರಿತಾಂಧಕಾರಕ್ಕೆ ರವಿ
ಯಂದದಲಿಪ್ಪರ ೪

ವರಭೀಮಾತೀರದಿ ಪರಿಶೋಭಿಸುವ ಮಣಿ
ಪುರದಿ ಪಂಡಿತ ಭೂಮಿ

ಸುರರ ಪರಿವಾರದಿ ನಿರುತ ಸೇವೆಯಗೊಂಡು
ಚರಣಾರಾಧಕರನು
ದ್ಧರಿಸಲೋಸುಗದಿ ಈ ವರವೃಂದಾವನ
ಸುಮಂದಿರದಿ ಕುಳಿತು ನಿತ್ಯ
ಗರಿಯು ತಲಿಷ್ಟಾರ್ಥವ ಪಿಪ್ಪಲವೆಂಬತರು
ಮೂಲದಲಿ ಮೆರೆವ
ಕಾರ್ಪರ ನರಹರಿಯ ಪಾದಾಂಬುಜವ
ಧೇನಿಸುತಿಪ್ಪ ಗುರುವೇದೇಶರ
ಶುಭ ಚರಣ ಯುಗಲವ ೫

## ೩೮

ಕೃಷ್ಣದ್ವೈಪಾಯನ ಗುರುರಾಜರ ಚರಣ ಕಮಲಕಾನಮಿಪೆ
ಶಿರಬಾಗಿ ಬಿನ್ನೈಪೆ ಪ

ಧರೆಸುರ ಮಂಡಿತ ಸುರಪುರದಲಿ ಮದ್ಗುರು
ಯಳಿಮೇಲಾರ್ಯರಿಗೆ ವರದ ಶಿರಿ ಅ.ಪ

ವೇದವ್ಯಾಸರ ಕರಕಮಲಜರೆನಿಸಿ ವೇದೇಶರ ಮುಖದಿ
ವೇದಾಂತ ಸುಶಾಸ್ತ್ರ ಜ್ಞಾನವ ಘಳಿಸಿ ಮೇದಿನಿಯೊಳು ಚರಿಸಿ
ವಾದಿವಾರಣ ಮೃಗಾಧಿಪರೆನಿಸುತ ಮೇದಿನಿ ಸುರರಿಗೆ
ಮೋದವ ಗರೆದ ೧

ಧರಿಜಾರಮಣನ ಪದಪೂಜಿಸಿದಂಥ ಶ್ರೀ ವ್ಯಾಸರ ಮಂತ್ರ
ಧರಿಯೊಳು ಜಪಿಸಿದರಿವರೆ ಮಹಾಂತರೆನಿಸಿದರತಿ ಶಾಂತ
ವರುಣಿಸಲೊಶವೆ ಗುರುವರ ಮಠದಲಿ ಸುರಗಂಗೆಯು
ಬಂದಿರುವ ಮಹಿಮೆಯನು ೨

ವರ ಭೀಮಾತಟದಿ ವಿರಾಜಿಸುವಂಥ ಕುಸುಮೂರುತಿ ಸಂಸ್ಥ
ಶರಣಾಗತ ಜನರಿಗೆ ಸಕಲಾಭೀಷ್ಟ ಗರಿಯುವ ಸುಸಮರ್ಥ

ಧರೆಯೊಳು ಮೆರೆಯುವ 'ಶಿರಿ ಕಾರ್ಪರ ನರಹರಿ' ಯ ನೊಲಿ–
ಸಿರುವ ಪರಮ ಮಹಾತ್ಮ ೩

## ೩೯

ಗುರುರಾಘವೇಂದ್ರ ಕರುಣಿಸೋ ತವಚರಣ ಸ್ಮರಣೆಯ ಪ

ಶರಣು ಜನಕೆ ಸುರತರುವೆಂದೆನಿಸುತ ವರ ಮಂತ್ರಾಲಯ
ಪುರದಿ ಮೆರೆವ ಶ್ರೀಮದ್ ೧

ನಂದತೀರ್ಥರ ಮತ ಸಿಂಧುವಿಗೆ ಪೂರ್ಣ
ಚಂದ್ರನೆನಿಸಿದ ಸುಧೀಂದ್ರ ಕರೋದ್ಭವ ೨

ಧರಿಯೊಳು ಶರಣರ ಪೊರೆವ ಕಾರ್ಪರನರ
ಹರಿಯನೊಲಿಸಿರುವ ಪರಿಮಳಾಚಾರ್ಯ ಶ್ರೀ ೩

## ೪೦

ಪಾಹಿ ಶ್ರೀ ಗುರುರಾಘವೇಂದ್ರ ಅಮಿತಗುಣ
ಸಾಂದ್ರ ಯತೀಂದ್ರ ಪ

ಶ್ರೀದ ಮೋದತೀರ್ಥ ಮತವಾರಿಧಿ
ವಿಧು ವಸುಧಾ ಸುವಿಬುಧಾ ೧

ಅಮಿತ ಮಹಿಮಾಲಂಕೃತಾಂಗ
ಕುಮತ ಗಜಸಿಂಗ ಶುಭಾಂಗ ೨

ಶರಣು ಜನ ಮಂದಾರ ಕರುಣಾ
ಶರಧೆ ದುರಿತ ಘನ ಸುಪವನಾ ೩

ಕೋಲತನಯಾ ಕೂಲಗತ ಮಂ
ತ್ರಾಲಯಾ ನಿಲಯಾ ಸುಕೃಪಯಾ ೪

ವೀರ ನಾರಸಿಂಹ ವಿಠಲ
ಚಾರು ಪದಕಮಲ ಸುಲೋಲ ೫

# ರಾಘವೇಂದ್ರರ ಸ್ತೋತ್ರ

## ೪೧

ಬಂದರಾ ರಾಘವೇಂದ್ರರಾಯರು ಮಂತ್ರ
ಮಂದಿರ ವೆಂಬೀ ಸ್ಥಳಕೆ ವಿಭವದಿ ಪ

ಇಂದು ಭಜಕ ದ್ವಿಜ ವೃಂದಕೆ ಪರಮಾ
ನಂದ ಗರಿಯಲು ಶ್ಯಂದನವೇರಿ ಅ.ಪ

ಸ್ಯಂದನವೇರಿ ಧಣಂ ಧಣ ವಾದ್ಯದಲಿ ಪೌರಜನ
ಸಂದಣಿಸಿತು ಆನಂದದಿ ನೋಡುತಲಿ
ಪ್ರಾರ್ಥಿಪರು ಮುಗಿಯುತಲಿಕ್ಕೈಯಾ ಕವಿಗೇಯಾ
ಶುಭಕಾಯಾ ಸುಧೀಂದ್ರರ ತನಯಾ ಗುರುವರಮಧ್ವ ಮು-
ನೀಂದ್ರರಾ ಸುಮತಾಂಬುಧಿ ಚಂದಿರ ಅತಿ ಸುಂದರ
ವೃಂದಾವನದಲಿ ನಿಂದಿಹರೆಂದರಿದೊಂದಿಪರಿಗೆ ಭವ
ಬಂಧವ ಬಿಡಿಸಲು ೧

ಸಡಗರದಲಿ ಬಿಳಿಗೊಡೆ ಚಾಮರ ವ್ಯಜನಾದಿಗಳನು
ಪಿಡಿದು ಸೇವಿಸುವ ಎಡಬಲದಲಿ ಸುಜನಾ
ಸಚ್ಛಾಸ್ತ್ರ ವೇದ ಪುರಾಣ ಪ್ರವಚನ ಪಾವನ್ನ
ಗುರುಗಳ ಗುಣಸ್ತವನ ಮಾಡುವಾ ವರಗಳ ಬೇಡುವಾ
ಕುಣಿಕುಣಿದಾಡುವಾ ಪಾಡುವಾ ಪೊಡವಿ ನಿರ್ಜರರ
ಗಡಣವ ನೀಕ್ಷಿಸಿ ಬಿಡದೆ ಪೊರಿವೆನೆಂದು
ಕಡು ವೈಭವದಲಿ ೨

ಥಳಥಳಿಸುತ ಕಂಗೊಳಿಸುವ ಮಣಿ
ಮುಕುಟ ದಿಂದ ದಿ-
ಗ್ವಲಯ ಬೆಳಗುತಿಹ ಚಲುವ ಮುಖದ ಮಾಟಾ
ಗಳದಲ್ಲಿ ಮೌಕ್ತಿಕದ ಹಾರ ಕೇಯೂರ ನೂಪರ ಸ-

ವರ್ಾಂಲಕಾರ ವಿಲಸಿತ ಮಂಗಳತರ ಗಾತ್ರದಿ
ಪೊಳೆಯುತ ಭಜಕರ ಕ–
ಲುಷಾಭ್ರಕೆ ಮಾರುತರೆನಿಸುತ ಇಳೆಯೊಳು ಪಂಡಿತ
ಯಳೆಮೇಲಾರ್ಯಗೊಲಿದು ಭಕುತ ವತ್ಸಲರೆಂದೆ ನಿಸುತ ೩

ಮಂಗಳ ತುಂಗ ತರಂಗಿಣಿ ತೀರದಲಿ ಭಕುತ ಜ–
ನಂಗಳಿಗೆ ನಿಖಿಲಾರ್ಥಂಗಳ ಸಲಿಸುತಲೀ
ಪಾಲಿಸುವ ದೇವ ಸ್ವಭಾವ ಶರಣ ಸಂಜೀವ
ಕರದಲ್ಲಿಗೆ ಬರುವ ಎನ್ನುತ ತುತಿಪರು
ದೃಗ್ಬಾಷ್ಪವ ಸುರಿಸುತ ಮೈಮರೆಯುತ
ಬಲು ನಿರ್ಮಲ ಅಂತರಂಗದಿತವ ಪದಂಗಳ
ಸ್ಮರಿಪರ ಸಂಘಕೆ ಸತತ ಸುಮಂಗಳವೀಯಲು ೪

ಪುರದರಸನು ತನ್ನ ಸಿರಿಪರಿವಾರದಲಿ
ಚರಿಸುತ ಬರುತ ಕಾಣುತಲೆ ಗುರುವರ
ಚರಣದಲಿ ಕಾಣಕೆಯನ್ನಿತ್ತು ಶಿರಬಾಗಿ ಚನ್ನಾಗಿ
ಆರುತಿಯ ಬೆಳಗಿ ಬರುತಿರೆ ರಥಸಾಗಿ ತೋರುವಾ
ನೋಳ್ಪರ ನಯನಕ್ಕೆ ಪರಮೋತ್ಸವಾ ಶರಣರ
ವಾಂಛಿತಗಳ ಗರಿಯುವಾ ಪೊರೆಯುವ ಧರೆಯೊಳು
ಮೆರೆಯುವ ಶಿರಿ ಕಾರ್ಪರ ನರಹರಿಯ ನೊಲಿಸಿರುವ
ಗುರು ಪ್ರಹ್ಲಾದರು ೫

## ೪೨

ಬಾರೋ ಗುರು ರಾಘವೇಂದ್ರ ಸದ್ಗುಣಸಾಂದ್ರ ಪ

ಬಾರೋ ಸದ್ಗುರುವರ ಸಾರಿದ ಸುಜನರ
ಘೋರ ದುರಿತವ ತರಿದು ಕರುಣದಿ
ಸಾರ ಸೌಖ್ಯವಗರಿದು ಪೊರಿಯಲು ಅ.ಪ

ಸೂರಿಜನಾಲಂಕೃತ ಸುರಮುರದಿ ವಿಠ್ಠ
ಲಾರ್ಯರಿಂದಲಿ ಪೂಜಿತ ಯದುಗಿರಿಯ
ಕ್ಷೇತ್ರಾಗಾರನೆಂದೆನಿಸಿ ನಿರುತ ಭಜಕರನು ಪೊರೆಯುತ
ವಾರವಾರಕೆ ಭೂಮಿಸುರ ಪರಿವಾರದಿಂ
ಸೇವೆಯನುಕೊಳ್ಳುತ
ಹಾರ ಪದಕಗಳಿಂದ ಬಲುಸಿಂಗಾರ
ತುರಗವನೇರಿ ಮೆರೆಯುತ ೧

ಭಕ್ತ್ಯಾದಿ ಫಲವೀವಂಥ ಗುರುವರನೆ ನಿಮ್ಮಯ
ಸ್ತೋತ್ರ ಪಠಣವ ಮಾಡುತ್ತ ಅನವರತ ಭಜ-
ನಾಸಕ್ತ ಜನರ ಕಾಮಿತ ನಾ ಕೊಡುವೆನೆನುತ
ಮತ್ತೆ ಎಡಬಲದಲ್ಲಿ ದ್ವಿಜಕೃತ ಛತ್ರಚಾಮರ
ವ್ಯಜನ ಸೇವಾ ನೃತ್ಯಗಾಯನ ವೈಭವದಿ ವರ
ಹಸ್ತಿವಾಹನ ವೇರಿ ಮೆರೆಯುತ ೨

ಇಳಿಸುರರೊಳು ಪ್ರಖ್ಯಾತ ಲಿಂಗೇರಿ ಭೀಮಾ
ಹೊಳಿಯ ಸ್ಥಾನಕೆ ಬಂದಂಥ ಯದುಗಿರಿಯ ದ್ವಿಜವರ
ಗೊಲಿದರ್ಚನಿಯ ಗೊಂಬಂಥ ಶರ್ವಾದಿವಿನುತ
ಚಲುವ ಪ್ರಾಣನಾಥನ ಜಲಜಯುಗ ಸನ್ನಿಧಿ
ಯೊಳನುದಿನ ಪೊಳೆವ ವೃಂದಾವನದಿ ಭಕುತರಿ
ಗೊಲಿದು ಪೊರೆಯಲು ಕುಳಿತ ಯತಿವರ ೩

ನಂದತೀರ್ಥರ ಸುಮತ ಸಿಂಧುವಿಗೆ ಪೂರ್ಣ
ಚಂದ್ರರೆಂದೆನಿಸಿ ದಂಥಾ ಕರ್ಮಂದಿವರ್ಯನೆ
ವಂದಿಸುವರ ದುರಿತ ಘನಮಾರುತ
ವಂದೆ ಮನದಲಿ ಬಂದು ನಿಮ್ಮಡಿ
ದ್ವಂದ್ವವನು ಶೇವಿಸುವ ಶರಣರ
ವೃಂದವನು ಪಾಲಿಸಲು ಸುಂದರಸ್ಯಂದನ-
ವೇರುತಲಿ ವಿಭವದಿ ೪

ನೀರಜಾಸನ ವರಬಲದಿ ಸಮರಾರೆನುತ ಬಂ–
ಗಾರ ಕಶ್ಯಪ ಪೂರ್ವದಿ ಪ್ರಹ್ಲಾದ ರಾಜಕು
ಮಾರ ನಿನ್ನೊಳು ವೈರದಿ ಹರಿಯನ್ನು ಜವದಿ
ತೋರು ತೋರೆಂದೆನಲು ಕೋಪದಿ ಚಾರು ಕೃಷ್ಣಾ
ತೀರಕಾರ್ಪರ ನಾರಸಿಂಹನ ಸ್ತಂಭದಿಂದಲಿ
ತೋರಿಸಿದ ಗುರು ಸಾರ್ವಭೌಮನೆ ೫

## ೪೩

ಭಕುತಿ ಪಾಲಿಸೊ ವಿರಕ್ತಿ ಕರುಣಿಸೊ ಪ

ಸತ್ಯಪ್ರೀಯಾ ತೀರ್ಥಕರಜ ಸತ್ಯಬೋಧ ಗುರುವರೇಣ್ಯಾ ಅ.ಪ

ಪೃಥ್ವಿಜಾವಲ್ಲಭನ ಪಾದ ನಿತ್ಯ ಪೂಜಿಸುತಲಿ ಜಗದಿ
ಮತ್ತಮಾಯಿ ಗಜಕುಲ ಪಂಚ ವಕ್ತ್ರರೆನಿಸಿ ಮೆರೆದ ಗುರುವೆ ೧

ನಂದತೀರ್ಥಮತ ಪಯೋಬ್ಧಿ ಚಂದ್ರ ಸದೃಶರೆನಿಸಿ ಸತತ
ನಂದ ಶಾಸ್ತ್ರ ಬೋಧಿಸಿ ಬುಧ ವೃಂದಕೆ ಆನಂದಗರೆದಿ ೨

ಇರುಳುಕಾಲದಲ್ಲಿ ನಭದಿ ತರಣಿಬಿಂಬ ತೋರಿದಂಥ
ಪರಮ ಮಹಿಮ ನಿಮ್ಮಯ ಶುಭ ಚರಣ
ಸ್ಮರಣೆ ಕರುಣಿಸೆನಗೆ ೩

ಕೋನೇರಿಯಾಚಾರ್ಯರು ನಿಮ್ಮ ಕಾಣುತ
ತೀರ್ಥವನು ಕೊಂಡು
ವಾನರ ದೇಹವನು ತ್ಯಜಿಸಿಸುಸ್ಥಾನ ಗತಿಯ
ಪಡೆದರು ಜವ ೪

ಶರಣು ಜನರ ಪೊರೆವ ಕಾರ್ಪರ ನರಹರಿ
ಪದದಿಂದ ಜನಿತ
ಸುರನದಿ ನಿಮ್ಮಯ ಬಳಿಗೆ ಬಂದಿರುವ
ಮಹಿಮೆ ತುತಿಸಲೆಂತು ೫

## ೪೪

ವರದೇಂದ್ರ ತೀರ್ಥರ ಪದಧ್ಯಾನ,
ಮುಕ್ತಿಮಾರ್ಗಕೆ ಸೋಪಾನ ಪ

ಗುರುವಸುಧೇಂದ್ರರ ಕರ ಕಮಲಜ ತವ ಚರಣಯುಗಲ
ಪರಿಶೇವನಾ ೧

ಪರಮತ ತಿಮಿರ ಭಾಸ್ಕರನೆಂಬುವ ತವ
ಬಿರುದಾವಳಿ ಸಂಕೀರ್ತನಾ ೨

ಕ್ಷೋಣಿಸುರರಿಗೆ ದ್ರವ್ಯ ದಾನದಿಂದಲಿ ಜಿತ
ಭಾನುಜರೆಂಬುವ ಭಾಷಣ ೩

ಹರುಷತೀರ್ಥರ ಮತ ಶರಧಿಗೆ ಪೂರ್ಣ
ಚಂದಿರನೆಂಬುವ ಶುಭಗಾಯನ ೪

ಶರಣರ ಪೊರಿವ ಕಾರ್ಪರನರಸಿಂಹನ
ಕರುಣ ಪಾತ್ರ ತವಶೇವನಾ ೫

## ೪೫

ವ್ಯಾಸ ತತ್ವಜ್ಞರ ಚರಿಯಾ ಮನಕಾಶ್ಚರಿಯಾ
ಪರಮಹಂಸ ಕುಲಜ ಭುವನೇಂಧ್ರರ ತನಯಾ ಪ

ಶೇಷಗಿರೀಶ್ವರ ಕೃಪಯಾ ಐಜಿ ವ್ಯಾಸವೆಂಕಟ ನರ–
ಸಿಂಹಾಭಿಧೇಯ ಭೂಸುರೋತ್ತಮರಿಗೆ ತನಯಾ ನೆನಿಸಿ
ಭಾಸುರ ಕೀರ್ತಿಯ ಪಡೆದ ರಾಮಾರ್ಯ ೧

ವೇಣಿ ಸೋಮಪುರ ನಿಲಯ ಪಾಹಿ
ಆನತ ಜನಸುರಧೇನೋ ಮಾಂಕೃಪಯಾ
ವೇಣು ಗೋಪಾಲನ ಪ್ರೀಯ ಎಂದು
ಧ್ಯಾನಿಪ ಜನರಘ ತಿಮಿರಕೆ ಸೂರ್ಯ ೨

ಕೇಳಿವರ ಮಹಿಮೆ ಅಪಾರ ಗದ್
ವಾಲ ಭೂಪಗೆ ಬಂದ ಭಯ ಪರಿಹಾರ
ಪೇಳಲು ಶ್ಲೋಕಾರ್ಥಸಾರ ಕೃಷ್ಣಾ
ಮೇಲೆ ಪ್ರವಹಿಸಲು ಓಡಿತು ಶತೃನಿಕರ ೩

ರಾಮ ಪದಾಂಬುಜ ಭೃಂಗ ತನ್ನ
ನೇಮದಿಂದಲಿ ಶೇವಿಪರ ಭವಭಂಗ
ಕಾಮಿತ ಫಲದ ಕೃಪಾಂಗ ಪರ ಬ್ರಹ್ಮ
ನಾನೆಂಬೊ ದುರ್ಮತ ಗಜಸಿಂಗ ೪

ನಂದ ನಂದನ ಗುಣಸ್ತವನ ಮಾಳ್ಪ
ನಂದ ತೀರ್ಥರ ಮತಾಂಬುಧಿ ಶೀತ ಕಿರಣ
ಒಂದಾರು ಜನರೊಳು ಕರುಣ ಕೃತ
ಮಂದ ನಂದಿನಿ ವ್ಯಜನಾದಿ ವ್ಯಾಖ್ಯಾನ ೫

ಘನ್ನ ಮಹಿಮ ಜಿತಕಾಮಾ ಅ–
ರಣ್ಯ ಕಾಚಾರ್ಯ ಸೇವಿತ ಪದ ಪದುಮ
ಸನ್ನುತ ಶುಭ ಗುಣಸ್ತೋಮ ಮನವೇ
ಬಣ್ಣಿಸಲೊಶವೆ ಪಂಚಾಮೃತ ಮಹಿಮಾ ೬

ವಾಸುದೇವನ ಗುಣತತಿಯ ಪೇಳಿ
ದಾಸ ಜನರಿಗೆ ಪಾಲಿಸಿದಿ ಸನ್ಮತಿಯಾ
ಭಾಸುರ ಕುಸುಮೂರ್ತಿರಾಯ ನೆನಿಸಿ
'ಶ್ರೀಶಕಾರ್ಪರ ನರಹರಿ' ಗತಿ ಪ್ರೀಯ ೭

೪೬

ಸ್ಮರಿಸೊ ಸಂತತ ಮಾನವ ಗುರುವಿಷ್ಣು ತೀರ್ಥರ ಪ

ಸ್ಮರಿಸೊ ಟೀಕೆಯ ವಿರಚಿಸಿದ ಗುರುವರರ
ಕರುಣದಿ ಜನಿಸಿ
ಧರೆಯೊಳು ನಿರುತ ಸ್ಮರಿಸುವ ಶರಣು ಜನರಘ
ತರಿದ ಭೀಷ್ಠೆಯ ಗರಿವರಂಘ್ರಿಯ ಅ.ಪ

ಪುರಹರಾಂಶಜರೆನಿಸಿ ಬಾಳಾಚಾರ್ಯರ
ತರುಣಿ ಗರ್ಭದಿ ಜನಿಸಿ
ಮಳಖೇಡ ಮಂದಿರ ಗುರುನಾಮದಲಿ ಕರಿಸಿ
ವಟು ವ್ರತವ ಧರಿಸಿ
ಗುರುಕುಲದಿ ರಾಮಾರ್ಯರಿಂದಲಿ ಅರಿತು
ವೇದವೇದಾಂತ ಶಾಸ್ತ್ರವ
ಗುರುಸುತನ ಮಹಜ್ವರ ಹರಣ ನರಹರಿಯ
ಮಂತ್ರವ ಜಪಿಸಿದವರನು ೧

ಗುರುತುರಗವನುಸರಿಸಿ ಬರುತಿರಲು ಬಿಸಿಲೊಳು
ಗುರುಪ್ರೀತಿಯನು ಬಯಸಿ ಗುರುವಿತ್ತ ಪಾದುಕವೆರಡು
ಶಿರದಲಿ ಧರಿಸಿ ಮಹಿಮೆಯನು ತಿಳಿಸಿ ಧರಿಸಿ ದ್ವಿತಿಯಾ
ಶ್ರಮದಿ ನೋಡಲು ಪರಮ ಸತ್ಕುಲ ಜಾದಿ ಗುಣಯುತ
ವರವಧೂ ಮಣಿಸಹಿತ ವಿಭವದಿ ಸಿರಿಯ
ತನದೋಳ್ಮೆರೆವರಂಘ್ರಿಯ ೨

ಮಂಚದೊಳ್ ಸುಖತಲ್ಪದಿ ಪದವತ್ತು

ತಿರೆ ಮೃಗಲಾಂಚನ ಮುಖಸಹಿತದಿ.

ಪವಡಿಸಿರಲೊಂದಿನ ಕಿಂಚಿದ್ದೇಹಾಸ್ವಾಸ್ಥ್ಯದಿ

ಹರಿದಾಸ ಪಾಡಿದ

ಮಂಚಬಾರದು ಮಡದಿಬಾರಳು ಮುಂಚೆ

ಮಾಡಿರಿ ಧರ್ಮವೆಂಬುವ

ಕಿಂಚಗೀತೆಯ ಕೇಳಿದೊಡನೆ ಪ್ರಪಂಚ

ಸುಖವನು ತ್ಯಜಿಸಿಪೊರಟರ ೨

ಫಣಿಯ ರೂಪವ ನೋಡುತ್ತ ಮಾರ್ಗದೊಳು

ಚರಿಸುತ ಗಮನ

ನಿರೋಧಿಸುತ ಯೋಚನೆಯ ಮಾಡುತಯಿರಲು

ಸ್ವಪ್ನದಿ ಸೂಚಿತ

ಶಿಷ್ಯರ ಸಮೇತ ಅನವರತ ಶ್ರೀ ಮತ್ಸುಧಾ

ಪ್ರವಚನ ವಿಜಯ ಮುನಿ

ಮನಕೆ ಸಮ್ಮತವೆನುತ ಮುನಿ ವೃತ್ತಿಯಲಿ ಸತಿಸಹ

ಮುನಿಯವಲ್ಲಿ ಯೊಳಿರುವ ಗುರುಗಳ ೪

ಸಾರ ಗ್ರಂಥಗಳ ರಚಿಸಿ ಸತ್ಯವರತೀರ್ಥ

ಕುಮಾರಕರೆಂದೆನಿಸಿ ಸುಕ್ಷೇತ್ರ

ಮೋದನೂರೊಳು ತನುವಿರಿಸಿ ಹರಿಪದವ

ಧ್ಯಾನಿಸಿ ಸೇರಿದವರ ಘ

ದೂರ ಮಾಡುವ ಚಾರು ಕೃಷ್ಣಾತೀರ

'ಕಾರ್ಪರ ನಾರಶಿಂಹ' ವಲಿಮೆ ಪಡೆದ

ಅಪಾರ ಮಹಿಮರ ಚಾರು ಚರಣವ ೫

## ೪೭

ಸತ್ಯಧ್ಯಾನರ ನಿತ್ಯ ಸ್ಮರಿಸಿ ಕೃತಕೃತ್ಯನು ನೀನಾಗೊ ಪ

ಮರ್ತ್ಯನೆ ಶ್ರೀ ಗುರು ಸತ್ಯಜ್ಞಾನ ಸುತೀರ್ಥರ ಕರ ಕಂ-
ಜೋತ್ಥರಾದ ಗುರು ಅ.ಪ

ಸುತ್ತಲು ಬಿಡದೆ ಧರಿತ್ರಿಯೊಳಗೆ ಸುಕ್ಷೇತ್ರಗಳಲಿ ಚರಿಸಿ
ಮತ್ತ ಮಾಯಿ ಜನ ಹಸ್ತಿ ಗಣಕೆ ಪಂಚ ವಕ್ತ್ರರೆಂದು ಕರಿಸಿ
ಛಾತ್ರ ವರ್ಗ ಸಂಯುಕ್ತರಾಗಿ ಸುಖತೀರ್ಥರ ಸುಮತಕೆ
ಸಂಸ್ಥಾಪಕ ಗುರು ೧

ಏನು ಕರುಣವೊ ಜ್ಞಾನಿಗಳನು ಧನದಾನದಿ ದಣಿಸುತಲಿ
ಕ್ಷೋಣಿ ವಿಬುಧರಿಗೆ ನ್ಯಾಯ ಸುಧಾರಸ ಪಾನ ಮಾಡಿಸುತಲಿ
ದೀನ ಜನಕೆ ಸುರಧೇನು ಎನಿಸಿದ ಮಹಾನುಭಾವರೆಂದು
ಸಾನುರಾಗದಲಿ ೨

ಹೇಮ ವಜ್ರಮಯ ಮಂಟಪದಲಿ
ಶ್ರೀರಾಮನ ಪದಪದುಮ
ನೇಮದಿ ಪೂಜಿಸುವಾ ಮಹ ವೈಭವ
ನೋಳ್ಪಜನರ ಜನುಮ
ಈ ಮಹಿಯೊಳು ಸಾರ್ಥಕವೆನಿಸಿತು ಬಹು
ಧೀಮಜ್ಜನರಿಗೆ ಕಾಮಿತ ಗರಿಯುವ ೩

ಹರಿಪದ ಪೊಂದಲು ಮರುತ ಶಾಸ್ತ್ರವೆಂಬೊ
ತರಣಿಯೋಳ್ಪಗಲಿರುಳು
ಹರುಷದಿ ಕುಳಿತಿಹ ಧರೆಸುರರನು
ಭವಶರಧಿಯ ದಾಟಿಸಲು
ಕರದೊಳು ದಂಡವ ಧರಿಸಿ ನಿಂದಿರುವರರುಣ
ವಸನದಲಿ ಪರಿಶೋಭಿತ ತನು ೪

ಶರಣು ಜನರ ಬಹು ದುರಿತ ತಮಕೆ ದಿನಕರ ಸಮರೆನಿಸುತಲಿ
ಸಿರಿ ಕಾರ್ಪರ ನರಹರಿಯ ಚರಣಯುಗ್ಮ ಸ್ಮರಿಸುತ ಹರುಷದಲಿ
ಧರೆಯೊಳು ಪಂಢರ ಪುರ ಸುಕ್ಷೇತ್ರದಿವರತನುವಿರಿಸಿದ
ಪರಮ ಮಹಿಮ ಗುರು ೫

## ೪೮

ಎಂತು ನಾ ತುತಿಸಲಿ ಯತಿವರ
ಚರ್ಯನಾ ಮುಗಿವೆನು ಕೈಯ್ಯಾ ಪ

ಮಂತ್ರಸದನ ಪದ ಚಿಂತಕ ಶ್ರೀ ರಘು ಕಾಂತಕರಜ ರಘು
ದಾಂತ ಯತೀಂದ್ರರ ಅ.ಪ

ಅಂತರಂಗದಿ ಸಂತತ ಶ್ರೀಹರಿಯ ಚಿಂತಿಸುತಲಿ ಭೂಮಿಯ
ಕಾಂತ ದಂಷ್ಟದಿ ಸಂಜನಿಸಿದ ನದಿಯ ಸಂಗಮ ಶುಭನಿಲಯ
ಶಾಂತದಾಂತ ಧೀಮಂತರೆನಿಸುತ ದಿಗಂತರದಲಿ
ವಿಶ್ರಾಂತ ಸುಮಹಿಮರ ೧

ಮೇದಿನಿ ಜಾತ ಪತಿ ಲಕ್ಷ್ಮಣರ ಪಾದಾಂಬುಜ ಮಧುಪರ
ಮೋದಾಶ್ರು ಸುರಿಸುತ ಪೂಜಿಸಿದವರ ಪುಲಕೀತ ವಿಗ್ರಹರ
ವಾದಿವಾರಣ ಮೃಗಾಧಿಪರೆನಿಸುತ ಮೋದತೀರ್ಥ ಸುಮ
ತೋದಧಿ ಚಂದಿರ ೨

ಇಳಿಯೊಳು ಚರಿಸುತ ಬುಧ ಜನರನ್ನು ಚಲಿಸುತ ಛಾತ್ರರನು
ತಿಳಿಸೀ ಸಚ್ಛಾಸ್ತ್ರವ ಮರ್ಮಗಳನ್ನು ಉದ್ಧರಿಸ್ಯವರನ್ನು
ಯಳಮೇಲಾರ್ಯರ ಒಲುಮೆ ಪಡೆದು ಭವ
ಜಲಧಿಯ ದಾಟಿದ ಕಲುಷ ವಿದೂರರ ೩

ಪ್ರಥಮಾಶಿಲೆ ಕ್ಷೇತ್ರದೊಳಿಹ ಗುರುವಿಜಯ
ದಾಸರ ಶುಭಚರಿಯ

ಸ್ತುತಿಸಿ ಶೇವಿಸಿ ಪಡೆದರು ಗುರುಕೃಪೆಯ ನೋಳ್ಪರಿಗಾಶ್ಚರ್ಯ
ನತ ಜನರಘ ಪರ್ವತ ಪವಿ ಸನ್ನಿಭ
ಕ್ಷಿತಿ ಸುರತತಿ ಸೇವಿತ ಪದ ಪದ್ಮರ ೪

ಕ್ಷೋಣಿಯೊಳು ಕಾಣೆ ನಿವರಿಗೆ ಸಮಾನ
ಜಾಣ ಮಾನವರನ
ಸಾನುರಾಗದಿ ಧ್ಯಾನಿಸಲಿವರನ್ನ ಕಾಮಿತ ಗರಿವರನ
ಶ್ರೀನಿಧಿ ಕಾರ್ಪರ ಸ್ಥಾನಗ ನರಪಂಚನನನೊಲಿಸಿದ
ಮೌನಿವರೇಣ್ಯರ ೫

೪೯

ಸ್ಮರಿಸೊ ಮಾನವನೆ ಗುರುಚರಣ ಅಂತಃ
ಕರಣ ಶುದ್ಧಿಯಲಿ ಮರೆಯದೆ ಪ್ರತಿದಿನ ಪ

ನಿರುತ ಸ್ಮರಿಪರ ದುರಿತ ಘನತತಿ ಮರುತ ಶ್ರೀ
ರಘುದಾಂತ ತೀರ್ಥರ ಕರಜ ಶ್ರೀ ರಘುವೀರ
ತೀರ್ಥರ ಚರಣಯುಗಲವ ಹರುಷದಿಂದಲಿ ಅ.ಪ

ಧರೆಯೋಳ್ ಸುಂದರ ಸುರಪುರದಿ ಜನಿಸಿ
ಗುರು ವಿಠ್ಠಲಾರ್ಯರ ಚರಣಾನುಗ್ರಹದಿ
ವರ ಶಬ್ದ ಶಾಸ್ತ್ರವ ತ್ವರದಿ ಕಲಿತು
ತುರಿಯಾ ಶ್ರಮವನೆ ಸ್ವೀಕರಿಸಿ ಗುರುಮುಖದಿ
ಮರುತ ಶಾಸ್ತ್ರವನರಿತು ಧರ್ಮದೊಳಿರುತ ವಿಷಯದಿ
ವಿರತಿಯಲಿ ಅನವರತ ಪ್ರವಚನ ನಿರತ ಸದ್ಗುಣ
ಭರಿತ ಪಾವನ ಚರಿತರಂಘ್ರಿಯ ೧

ಹೇಮಾಲಂಕೃತ ರತ್ನನಿಚಯಯುಕ್ತ
ಹೇಮ ಮಂಟಪದಿ ಸುಂದರ ಶುಭಕಾಯಾ

ಶ್ರೀ ಮನೋಹರ ಕವಿಗೇಯಾ ಬ್ರಹ್ಮ
ವ್ಯೋಮ ಕೇಶಾದಿ ನಿರ್ಜರಗಣಶೇವ್ಯಾ
ಭೂಮಿ ಸುರಜನ ಸ್ತೋಮಕನುದಿನ
ಕಾಮಿತಾರ್ಥವ ಗರಿವ ಸೀತಾರಾಮರಂಘ್ರಿಯ
ತಾಮರಸವನು ನೇಮದಿಂದರ್ಚಿಪರ ಶುಭಪದ ೨

ಪರಿಶೋಭಿಸುವ ಕಾಷಾಯ ವಸ್ತ್ರ
ವರನಾಮ ಮುದ್ರಾಲಂಕೃತ ತನುಸಿರಿಯ
ಗುರು ಅಕ್ಷೋಭ್ಯರ ಶುಭಚರಿಯ ಗ್ರಂಥ
ವಿರಚಿಸಿದರು ನವರತುನ ಮಾಲಿಕೆಯ
ಧರಣಿಯೊಳು ಸಂಚರಿಸುತಲಿ ಬಲು
ಕರುಣದಿಂದಲಿ ಶರಣು ಜನರಘ
ಹರಣ ದೀನೋದ್ಧರಣ ಭವ ಭಯಹರಣ
ಗುರುವರ ಚರಣಯುಗಲವ ೩

ಮಾರಾರಿ ವಿನುತ ಸಮೀರ ಕೃತ
ಸಾರಶಾಸ್ತ್ರವನೆ ಬೋಧಿಸುತ ಸಜ್ಜನರ
ಘೋರ ಸಂಸೃತಿ ಭಯದೂರ ಮಾಡಿ
ತೋರಿ ಸನ್ಮಾರ್ಗ ದೀಪಿಕೆಯ ಸುಸಾರ
ಸೇರಿದವರಘ ದೂರ ಪರಮೋದಾರ ಗುಣ ಗಂ–
ಭೀರರೆನ್ನುತ ಸೂರಿಜನ ಪರಿವಾರನುತ ಜಿತ–
ಮಾರ ಶ್ರೀ ರಘುವೀರ ತೀರ್ಥರ ೪

ಶೇಷಾಚಲದಿ ಶಿಷ್ಯಗಣದಿ ಬಂದ
ಶ್ರೀ ಸತ್ಯ ಪ್ರಮೋದ ತೀರ್ಥರ ಸ್ವರ್ಣೋತ್ಸವದಿ
ತೋಷಬಡಿಸುತ ನಿರ್ಭಯದಿ ಉಪನ್ಯಾಸ ಮಾಡಿದರು
ವಿದ್ವಾಂಸರ ಸಭದಿ ವೀಶಗಮನ ಸುರೇಶ ಭಕುತರ
ಪೋಷ ಕಾರ್ಪರ ವಾಸ ಸಿರಿ ನರಕೇಸರಿಗೆ ಪ್ರಿಯದಾಸ
ಕೊಡಲಿವಾಸ ಕರ್ಮಂದೀಶರಂಘ್ರಿಯ ೫

## ೫೦

ಮಧ್ವಸಿದ್ಧಾಂತ ವೈಭವ ನೋಡಿರೈ ಸಭೆಯ
ವೈಭವ ನೋಡಿರೈ ಪ

ಗುರುವರೇಣ್ಯ ಸತ್ಯ ಪ್ರಮೋದ ತೀರ್ಥರು ಸಂಭ್ರಮದಲಿ
ಮೆರೆದು ಬರುವ ವೈಭವ ನೋಡಿರೈ ೧

ಪರಮಹಂಸ ಪರಿವ್ರಾಜಕಾದಿ ಸ
ದ್ಬಿರುದುಗಳಿಂದಲಿ ಕರೆಸಿಕೊಳ್ಳುವ ೨

ಅಂದಣದಲಿ ನಲುವಿಂದ ಪರಾಶರ
ಕಂದನ ನಿರಿಕ್ಷ್ಯಾನಂದ ಬಡುವ ೩

ಸುಂದರ ರಾಜಮಹೇಂದ್ರ ಪುರದಿ ಜನ
ಸಂದಹಿಯೋಳ್ಬುಧ ವೃಂದ ಬರುವ ೪

ಮೋದತೀರ್ಥ ಸುಮತೋದಧಿ ಚಂದ್ರ ಪ್ರ
ಮೋದ ತೀರ್ಥರಿವರೆಂದು ನುಡಿವ ೫

ಮೇದಿನಿ ಸುರಕೃತ ವೇದ ಘೋಷಣ ಸು–
ನಾದ ಭರಿತ ಬಹುವಾದ್ಯ ನಿನದ ೬

ಹರಿದಾಸರು ಸುಸ್ವರದಿ ಪಾಡುತಲಿ
ಪರವಶದಲಿ ತನುಮರೆದು ಕುಣಿವ ೭

ಕಂಡೆನು ಪರಮತ ಖಂಡನದಿ ಸುಧೆಯ
ಮಂಡನೋತ್ಸವದಿ ಕಂಡುಬರುವ ೮

ಚಲುವ ಗುರು ಚರಣ ಜಲಜಕೆ ನಮಿಸುತ
ಲಲನೆಯರಾರುತಿ ಬೆಳಗುತಿರುವ ೯

ನೇಮದಿ ಎಡಬಲ ಭೂಮಿಸುರರು ಕೈ
ಚಾಮರ ಬೀಸುತ ಸಾಮ ಪಠಣ ೧೦

ಭಯವ ಪುಟ್ಟಿಸಿ ಹೃದಯದಿ ಮಾಯ್ಗಳ
ಜಯ ಘೋಷದಿ ನಿರ್ಭಯದಿ ಬರುವ ೧೧

ಕಾಣೆನು ಸತ್ಯಜ್ಞಾನ ತೀರ್ಥರ ಸ–
ಮಾನ ಗುರುಗಳೆಂದಾನಮಿಸುವ ೧೨

ಪಾವನತರ ಗೋದಾವರಿ ಸ್ನಾನದಿ
ಶ್ರೀವರನಂಘ್ರಿಯ ಶೇವಿಸುವರ ೧೩

ವಿದ್ವಜ್ಜನನುತ ಮಧ್ವಮುನಿಯ ಮತ
ವೃದ್ಧಿಕಾರಿಣಿ ಪ್ರಸಿದ್ಧ ಸಭೆಯ ೧೪

ಧರೆಯೊಳು ಸಿರಿ ಕಾರ್ಪರ ನರಸಿಂಹನೆ
ಪರನೆಂದರುಹುತ ಮೆರೆವ ಸಭೆಯ ೧೫

## ೫೧

ರಾಮ ಧ್ಯಾನ ಸುತೀರ್ಥರ ಸ್ಮರಿಸುತ
ಕಾಮಿತವನು ಪಡಿಯೋ ಪ

ಈ ಮಹಿಯೊಳು ರಘುವೀರ ತೀರ್ಥರ ಕರ–
ತಾಮರಸೋದ್ಭವರೆನಿಸಿ ಮೆರೆದ ಗುರು ಅ.ಪ

ಧರೆಸುತ ಮಂಡಿತ ಸುರಪುರದಲಿ ದ್ವಿಜ
ವರ ಕುಲದಲಿ ಜನಿಸಿಯಳಿಮೇ–
ಲಾರ್ಯರ ಬಳಿಯಲಿ ಶಬ್ದಾವಳಿ
ಶಾಸ್ತ್ರವ ಪಠಿಸಿ ಇಳಿಸುರನುತ

ರಘುವೀರತೀರ್ಥ ಕರ ಜಲಜೋದ್ಭವ
ರೆನಿಸಿ ಕಲಿತು ಗುರುಮುಖದಿ
ಮರುತ ಶಾಸ್ತ್ರವನು ತಿಳಿಸುತ ಬುಧಜನ
ರೊಲಿಸಿದಂಥ ಗುರು ೧

ಹೇಮಮಂಟಪದಿ ಭೂಮಿ ಸುತಾನ್ವಿತ
ರಾಮನ ಪೂಜಿಸು ತಾ ಶ್ರೀಮನ್ಮಧ್ವಕ
ರಾಬ್ಜಾದಾಗತ ಸೌಮಿತ್ರಿಯ ಸಹಿತ
ಸಾಮವ ಪಠಿಸುವ ಭೂಮಿಸುರಜನ
ಸ್ತೋಮದಿ ಶೋಭಿಸುತ ಧೀಮಜನರಿಗೆ
ಪ್ರೇಮದಿಂದ ಮೃಷ್ಟಾನ್ನದಾನ ಸನ್ಮಾನ
ಮಾಡುತಿಹ ೨

ಭೂತಳದಲಿ ಸುಕ್ಷೇತ್ರ ಬಹು ಆರ್ಥ
ಯಾತ್ರಿಗಳಾ ಚರಿಸಿ ಭೂತಬಾಧೆ
ರೋಗಾತುರ ಜನಗಳ ಭೀತಿಯು ಪರಿಹರಿಸಿ
ಶಾಸ್ತ್ರಸುಧಾರಸ ಸತ್ಯಮೋದ ಯತಿ–
ನಾಥರಿಂದ ಗ್ರಹಿಸಿ ಖ್ಯಾತ ಕಾರ್ಪರ
ಕ್ಷೇತ್ರದಿ ನರಮೃಗನಾಥನ ಪ್ರೀತಿಗೆ
ಪಾತ್ರರೆನಿಸಿರುವ ೩

## ೫೨

ಗುರುವರ್ಯ ಪುರಂದರ ಗುರುವರ್ಯ ಪ

ಗುರುವರ್ಯ ಕಾಯಬೇಕೆನ್ನ ಮಧ್ವ
ಗುರುಕೃತ ಗ್ರಂಥಾರ್ಥಜ್ಞಾನ ಕೊಟ್ಟು
ಕರಣತ್ರಯ ಗಳಿಂದಾಚರಿಸುವ ಕರ್ಮವ
ಹರಿಮಾಡಿಸುವನೆಂಬ ಸ್ಮರಣೆಯ ಕರುಣಿಸೊ ಅ.ಪ

ಸುರಮುನಿ ನಿನ್ನ ಪ್ರಾರ್ಥನದಿ ಶ್ರೀ ಮ
ದ್ಗುರು ವೇದವ್ಯಾಸರು ದಯದಿ ಪಾ–
ಮರ ಪಂಡಿತರಿಗೆ ಸುಲಭದಿ ಧರ್ಮ ತಿಳಿದಾ–
ಚರಿ ಪರೆಂದು ಮುದದಿ ಅರಿತು
ನಿರುತ ಶೇವಿಪರಿಗೆ ಪರಮ ಮಂಗಳವೀವ
ವರ ಭಾಗವತ ಗ್ರಂಥ ನಿರ್ಮಿಸಿದರು ಸತ್ಯ ೧

ಕಲಿಯುಗದಲಿ ಹರಿನಾಮ ಜನರ
ಕಲಿ ಕಲ್ಮಷಾದ್ರಿ ಸೂತ್ರಾಮ ಎಂದು
ತಿಳಿದು ಕೀರ್ತಿಪರಿಗೆ ಪರಮ ಮಂ
ಗಳ ಕರನಾಮದ ಮಹಿಮ ಎನುತ
ಇಳಿಯೊಳು ವರ ಪುರಂದರ ಗಡ
ದಲಿ ಪುಟ್ಟಿ ಬಲು ವಿಧ ಹರಿನಾಮಂ–
ಗಳನು ವಿರಚಿಸಿದ ೨

ಕಾಶ್ಯಾದಿ ಕ್ಷೇತ್ರ ಸಂಚರಿಸಿ ಪದ
ರಾಶಿ ಸುಳಾದಿಗಳ ರಚಿಸಿ ಸಂ–
ತೋಷ ತೀರ್ಥರ ಮತ ಬಲಿಸಿ ಗುರು
ವ್ಯಾಸರಿಂದುಪದೇಶ ಗ್ರಹಿಸಿ ಜಗದಿ
ಭೂಸುರ ಪಾಲಕ ಶ್ರೀಶಕಾರ್ಪರನರ
ಕೇ ಸರಿ ಗತಿ ಪ್ರಿಯ ದಾಸರೆಂದೆನಿಸಿದ ೩

## ೫೩

ವಿಜಯರಾಯ ಭಜಿಸೋ ಹೇ ಮನುಜಾ ನೀ ಪ

ವಿಜಯರಾಯರ ಪಾದ ಭಜಿಸುವ ಮನುಜರ
ವೃಜಿನ ವಾರಿಧಿಗೆ ಕುಂಭಜರೆನಿಸಿದ ಗುರು ಅ.ಪ

ಮೊದಲು ಬೃಗುಮುನಿರೂಪದಿ ಶೀ-
ಘ್ರದಿ ಪೋಗಿ ಬರಲು ಶ್ರೀಹರಿ ಲೋ-
ಕದಿ ವಿಧಿ ವಿಷ್ಣು ಶಿವರೊಳು
ಪದುಮನಾಭನಕಿಂತ ಅಧಿಕರಿಲ್ಲೆಂದು ನಾ
ರದ ಮುನಿಗರುಹಿದ ೧

ಜಗದೊಳು ಸಕಲ ಕ್ಷೇತ್ರ ತೀರ್ಥಗಳ
ಮಹಿಮೆಯ ವರ್ಣಿಸುತ ಖಗರಾಜ
ಗಮನ ಶ್ರೀ ಭಗವದ್ಗುಣಗಳನ್ನು
ಬಗೆ ಬಗೆ ಪದಸುಳಾದಿಗಳಿಂದ ತುತಿಸಿದ ೨

ಕಾಶಿಯೊಳಗೆ ಸಂಪ್ರಾಪ್ತ ಪುರಂದರ
ದಾಸರಿಂದಲಿ ಅಂಕಿತ
ಶೇಷಶಯನ ಶ್ರೀನಿವಾಸ 'ಕಾರ್ಪರನರ-
ಕೇಸರಿ ' ಗತಿ ಪ್ರಿಯ ದಾಸರೆಂದೆನಿಸಿದ ೩

## ೫೪

ಗೋಪಾಲದಾಸರಾಯ ಮಾಂಪಾಲಯ ಪ

ಗೋಪಾಲದಾಸರಾಯಾ ಅಪಾರ ಮಹಿಮ ಮ-
ತ್ತಾಪಗಳೋಡಿಸಿ ಕಾಪಾಡೊ ಗುರುರಾಯ ಅ.ಪ

ಗಜಮುಖ ನಮಿಸುವೆ ಸುಜನ ಪಾಲಕ ಶ್ರೀಮದ್
ವಿಜಯದಾಸರಿಗೆ ನಿಜ ಶಿಷ್ಯರೆನಿಸಿದ ೧

ಧನ್ವಂತ್ರಿ ಜಪದಿ ಜಗನ್ನಾಥದಾಸರ
ಬನ್ನವ ಬಿಡಿಸಿದ ಘನ್ನ ಮಹಿಮಗುರು ೨

ಏನು ಕರುಣವೋ ಶ್ರೀ ಮಾನವಿ ದಾಸರಿಗೆ
ಸಾನುರಾಗದಿ ಆಯುರ್ದಾನವ ಮಾಡಿದ ೩

ಪದುಮನಾಭನ ಪದಪದುಮ ಮಹಿಮೆಗಳ
ವಿಧ ವಿಧ ಪದಸುಳಾದಿಗಳಿಂದ ತುತಿಸಿದ ೪

ಶರಣು ಜನಕೆ ಸುರತರುವೆನಿಸಿ ಧರೆಯೊಳು
ಮೆರೆವ ' ಕಾರ್ಪರ ನರಹರಿ' ಯ ನೊಲಿಸಿದಂಥ ೫

## ೫೫

ಶೇರಿ ಸುಖಿಸು ಮಾನವ ಗುರುಚರಣ ಸರೋಜವ ಪ

ಶೇರಿದ ಶರಣರ ಘೋರ ಪಾತಕವೆಂಬೊ
ವಾರಿದ ಗಣಕೆ ಸಮೀರ ಜಗನ್ನಾಥ
ಸೂರಿವರ್ಯ ದಾಸಾರ್ಯರಂಘ್ರಿಯನು ಅ.ಪ

ತಾರತಮ್ಯವ ತಿಳಿಯದೀ ಕಲಿಯುಗದಿ ಮುಕ್ತಿ
ದಾರಿಗಾಣದೆ ಭವದಿ ಬಿದ್ದ ಸಜ್ಜನೋ–
ದ್ಧಾರ ಮಾಡಲು ದಯದಿ ಬ್ಯಾಗವಾಟದಿ
ನಾರಸಿಂಹಾಖ್ಯ ವಿಪ್ರಾಗಾರದೊಳುದ್ಭವಿಸಿ
ಶ್ರೀರಮಾಪತಿಯ ಚಾರು ಕಥಾಮೃತ
ಸಾರವಧರೆಯೊಳು ಬೀರಿದಂಥವರ ೧

ಮೇದಿನಿಯೊಳು ಚರಿಸಿ ವ್ಯಾಕ್ಯಾರ್ಥದಿ ಬಹುದು–
ರ್ವಾದಿಗಳನೆ ಜಯಿಸಿ ಎನಿಸಿದರು ಪೂರ್ಣ
ಭೋಧ ಮತಾಬ್ಧಿಗೆ ಶಶಿ ನೃಪಮಾನ್ಯರೆನಿಸಿ
ಶ್ರೀದ ಪ್ರಹ್ಲಾದಾನುಜ ಸಲ್ಹಾದರೆ ಇವರೆಂದು
ಸಾದರದಿ ಬಿಡದೆ ಪಾದ ಪಂಕಜಾ ರಾಧಕರಿಗೆಸುರ
ಪಾದಪರೆನಿಪರ ೨

ಕ್ಷೋಣಿ ವಿಬುಧ ಗಣದಿ ಸೇವೆಯಕೊಳುತ
ಮಾನವಿಯೆಂಬೊ ಕ್ಷೇತ್ರದಿ ಮಂದಿರ ಮಧ್ಯ
ಸ್ಥಾಣುವಿನೊಳು ಮುದದಿ ಕಾರ್ಪರವೆಂಬೊ
ಕಾನನದಲಿ ಕೃಷ್ಣಾವೇಣಿ ಕೂಲದಿ ಮೆರೆವ
ಶ್ರೀನಿಧಿ ನರ ಪಂಚಾನನಂಘ್ರಿಯುಗ
ಧ್ಯಾನದಿ ಕುಳಿತ ಮಹಾನುಭಾವರನು ೩

## ೫೬

ದಾಸವರ್ಯ ಪೋಷಿಸೆನ್ನನು ಪ್ರಾರ್ಥಿಸುವೆ ಶೇಷ
ದಾಸವರ್ಯ ಪೋಷಿಸೆನ್ನನು ಪ

ಪೋಷಿಸೆನ್ನ ಮನದಿ ಬಹದೋಷಗಳನು
ತರಿದು ಇಂದಿ-
ರೇಶನಂಘ್ರಿಧ್ಯಾನವ ಪ್ರತಿವಾಸರದಲಿ ಒದಗುವಂತೆ ಅ.ಪ

ದೇಶ ದೇಶಗಳಲಿ ಭಜಿಪ ದಾಸ ಜನರ ಮನದ ಅಭಿ-
ಲಾಷೆಗಳನು ಸಲಿಸುತಲಿ ಸುರೇಶನಂತೆ ಮೆರೆದ ಶೇಷ ೧

ಮಂದನಾದರು ನಿಮ್ಮಯ ಪದದ್ವಂದ್ವ
ಭಜಿಸೆ ಜಗದಿ ಪ್ರಾಜ್ಞ-
ನೆಂದು ಕರೆಸುವನು ಯೆನುತ ನಾವಂದಿಸುವೆ
ಸುಜ್ಞಾನವಿತ್ತು ೨

ಕರುಣಶರಥೇ ನಿಮ್ಮ ನಾಮ ಸ್ಮರಣೆ
ಮಾತ್ರದಿ ಭೂತ ಪ್ರೇತಗ-
ಳಿರದೆ ಪೋಪವು ಶರಣು ಜನರ ದುರಿತ
ಘನಕೆ ಮರುತರೆನಿಪ ೩

ಈ ಮಹಿಯೊಳಗಾದಿ ಶಿಲೆಯ ಸ್ವಾಮಿಯ
ಪದದಿಂದೆ ತ್ರಿಪಥ
ಗಾಮಿನಿಯಳ ತೋರಿ ಸ್ವಜನ ಕಾಮಿತವ ಪೂರೈಸಿದಂಥ ೪

ಶೇರಿದ ಪರಿವಾರಕೆ ಸುರ ಭೂರುಹವೆಂದೆನಿಸುವಂಥಾ
ಪಾರ ಮಹಿಮ ' ಕಾರ್ಪರ ಸಿರಿನಾರಸಿಂಹ'ನ
ನೊಲಿಸಿದಂಥ ೫

## ೫೭

ಗುರು ನಾರಪ್ಪಯ್ಯನ ಚರಣಕಮಲಯುಗ್ಮ
ನಿರುತ ಸ್ಮರಿಸೆಲೊ ಮಾನವ ಪ

ನಿರುತ ಸ್ಮರಿಸುವ ಶರಣು ಜನರಘ–
ತರಿದಭೀಷ್ಟೆಯ ಗರಿಯಲೋಸುಗ
ಧರಣಿ ವಲಯದಿ ಮೆರೆವ ವೆಂಕಟ
ಗಿರಿಯ ರಮಣನ ಕರೆದು ತಂದಿಹ ಅ.ಪ

ಧರೆಸುರರೊಳು ಜನಿಸಿರಲು ಭ್ರಾತ್ರರುನಾನಾ
ಪರಿಬಾಧಿಸಲು ಸಹಿಸಿ ಚರಣ ಯಾತ್ರೆಯಲಿಂದ
ಗಿರಿಯಕಾಣುತ ಮಲಗಿರಲು ಸ್ವಪ್ನದಿಸೂಚಿಸಿ
ಧರಣಿ ದೇವನೆ ನಿನಗೆ ದರುಶನ ಕೊಡಲು ನಾ
ಬರುವೆನೆಂದಾಜ್ಞಾಪಿಸಿ ಭಕ್ತನನುಸರಿಸಿ
ತುರುಸ್ವರೂಪವ ಧರಿಸಿ ಬರುತಿರೆ
ಕುರಿಕಿಹಳ್ಳಿಯ ಗ್ರಾಮದಿಂದಲಿ
ತರುವರಾಶ್ವತ್ಥದಲಿ ಸಲೆ ಪಾಲ್ಗರಿದ ದೇವನ
ಕರೆದು ತಂದಿಹ ೧

ನಾರಾಯಣಾರ್ಯರು ಕಾರ್ಪರಾರಣ್ಯದಿ
ಆರಾಧಿಸುತಲಿರುತ ಆರಾರು ಭಕುತರು

ಗೋಧನ ಧಾನ್ಯದಿ ಸಾರಾವಸ್ತುಗಳೀಯುತ್ತ
ಗೋರಕ್ಷಣವ ಮಾಡಿರೆನುತ ತಮ್ಮಯ ಬಂಧು
ಬಾಲಕರಿಗೆ ಪೇಳುತ್ತ ಭಯ ಬ್ಯಾಡಿರೆನುತ
ಚಾರು ಶಿಲೆಯೊಳಗೊಂದು ದಿನ ಅಂಗಾರದಲಿ ಶ್ರೀ
ಭಾರತೀಶನ ಮೂರುತಿಯ ಬರೆದೀತ ಭಯ ಪರಿ-
ಹಾರಕನು ನಿಮಗೆಂದು ಪೇಳಿದ ೨

ಧರಣಿ ಪಾಲಕನಿಂದ ನಿರ್ಮಿತಮಾದ ಬಂ-
ಧುರ ನಿಲಯದಿ ರಾಜಿತ ತರುಮೂಲದೊಳಗವ-
ತರಿಸಿ ಷೋಡಶ ಸಂಖ್ಯ ಕರಗಳಿಂದಲಿ ಶೋಭಿತ
ವರ ಕೃಷ್ಣಾ ಜಲದೊಳಗಿರುವ ಪ್ರತಿಮೆಯ ತಂದು
ತರು ಬಳಿಯಲಿ ಸ್ಥಾಪಿತ ಶ್ರೀಭೂಸಮೇತ
ತಿರುಮಲೇಶನ ಮೂರ್ತಿ ಸಹಿತದ
ನಿರುತ ಪೂಜೆಯಕೊಳುತ ಧರೆಯೊಳು
ಶರಣು ಜನರನು ಪೊರೆವ ಕಾರ್ಪರ ನಿಲಯ
'ಸಿರಿನರ ಹರಿ'ಯನೊಲಿಸಿದ ೩

## ೫೮

ಸ್ಮರಿಸುವ ನರನೇ ಧನ್ಯ ಸನ್ಮಾನ್ಯ ಪ

ಸ್ಮರಿಸುವರಿಗೆ ಸುರತರುಕಲ್ಪ ವಿಭರಾಮ
ಪುರದಿ ಶ್ರೀಹರಿ ಧ್ಯಾನಪರ ಶ್ರೀ ಕೃಷ್ಣಾಚಾರ್ಯರ ಅ.ಪ

ಭರತ ಭೂಮಿಯೊಳವತರಿಸಿ ದೇವಾಂಶದಿ
ಪುರುಹೂತನಂತೆ ಗಜಾಂತ ವೈಭವದಿಂದ
ಮೆರೆಯುತ ತಮ್ಮಯ ಚರಣಾರಾಧಕರನು-
ದ್ಧರಿಸಲೋಸುಗದಿ ಸಂಚರಿಸುತ ಮುದದಿ
ಸಂದರುಶನದಿಂಧಾಘವ ಕಳೆದು ಬಲು
ಕರುಣದಲಿಷ್ಟಾರ್ಥವ ಗರಿದು ಬಹು ಶರಣು ಜ-

ನರ ಪೊರೆವ ಭೂಸುರರೊಳು ಮರುತ ಮತಾಬ್ಧಿ
ಚಂದಿರನೆನಿಸಿದವರ ೧

ವರ್ಣಿಸಲೊಶವಲ್ಲ ಚರಣಯುಗ್ಮಾರಭ್ಯ
ಶಿರಪರಿಯಂತರ ಗುರುಗಳಾಕೃತಿಯನ್ನು
ನಿರುತ ಧ್ಯಾನಿಪರಿಗೆ ಪರಮ ಮಂಗಳವೀವ
ಪರಿಶೋಭಿಸುವ ರತ್ನಾಭರಣದಿಂದೊಪ್ಪುವ
ಸ್ವರ್ಣತುಲಸಿ ಮುಕ್ತಹಾರ ಭೂಷಿತ ಕಂಧರ
ಸುಂದರವಾದ ಮುಖದೊಳು ಮಂದಸ್ಮಿರ
ಕಸ್ತೂರಿಯಂತೆ ಪರಿಮಳಾನ್ವಿತ ಶರೀರ
ಮಂತ್ರಾಲಯ ಗುರುರಾಘವೇಂದ್ರರ ಕರುಣಾಸುಪಾತ್ರರ ೨

ಚಿರಕಾಲ ಶೇವಿಪ ಪರಮ ವಂಧ್ಯರಿಗೆಲ್ಲ
ವರಪುತ್ರ ಸೌಖ್ಯವ ಕರುಣಿಸುವರು ಸತ್ಯ
ಅಪರಿಮಿತ ಮಹಿಮರೆಂದರಿಯದೆ ಇವರನ್ನು
ಜರಿಯಲಾಕ್ಷಣದಲಿ ಅರಿತು ಭೀಕರವಾದ
ಉರಗರೂಪವ ತೋರುತ ತ್ಯಜಿಸಿ ಮತ್ತೆ
ನಿಜರೂಪದಿಂದಿರುತ ನೋಳ್ಪರಿಗತ್ಯಾಶ್ಚರ್ಯ ಸದ್ಗುಣ
ಭರಿತ ಕಾರ್ಪರ ನರಹರಿಯ ಪರೋಕ್ಷದಿ ನಿರುತ
ಸುಖಿಪರಂಘ್ರಿ ೩

## ೫೯

ತೆರಳಿಪೋದರು ವಿಠ್ಠಲಾರ್ಯರಿಂದು
ಮುರಹರನ ಚರಣವನು ಸ್ಮರಿಸುತಲಿ
ಹರಿಪುರಕೆ ಪ

ಸುರಪುರದಿ ಜನಿಸಿ ದೇವಾಂಶರೆಂದೆನಿಸಿದರು
ಪುರುಹೂತನಂತೆ ಸಕಲೈಶ್ವರ್ಯದಿಂ
ಗುರುರಾಘವೇಂದ್ರರೊಲಿವರಿಗೆ ಪಾತ್ರರೆಂದೆನಿಸಿ
ನರಯಾನದಲಿ ಕುಳಿತು ಮೆರೆದರತಿ ವೈಭವದಿ ೧

ಬಂದ ಶಿಷ್ಯರಿಗೆ ನಿರುತ ಅನ್ನೋದಕವನಿತ್ತು
ತಂದೆಯಂತೆ ಸಲಹಿ ಪ್ರೀತಿಯಿಂದ
ಮಂದಹಾಸದಿ ಶಾಸ್ತ್ರಮರ್ಮಗಳ ಪೇಳಿಬುಧ
ರೆಂದೆನಿಸಿದಂಥ ಮಹಾಮಹಿಮರಾನಂದದಲಿ ೨

ಪ್ರತಿವರ್ಷದಲಿ ಭಾಗವತ ಪುರಾಣವ ಜನಕೆ
ಅತಿಹಿತದಿ ಪೇಳಿ ದುಷ್ಕೃತವ ಕಳೆದು
ಗತಿಯೆಂದು ನಂಬಿದ ಭಕುತ ಜನಕೆಧರ್ಮಪ
ದ್ಧತಿಗಳನು ಪೇಳುತ ಪ್ರತಿಮರೆಂದೆನಿಸಿ ೩

ಭೂತಲದಿ ಜನಿಸಿ ಬಹು ಖ್ಯಾತಿಯನು ಪಡೆದು ನರ
ನಾಥರಿಂದಲೆ ಮಾನ್ಯರಾಗಿ ಮೆರೆದು
ಪ್ರೀತಿಯಿಂ ಭಜಿಪ ಶಿಷ್ಯೋತ್ತಮರನುದ್ಧರಿಸಿ
ಶ್ರೀ ತರುಣಿ ಪತಿ ಬಳಿಗೆ ಪೋಗುವಾ ತುರದಿ ೪

ಮೋದದಿಂ ಪಿಂಗಲ ಸಮಾ ಮಾಘವದಿ ಪಂಚ
ಮೀ ದಿನದಿ ಆದಿವಾರ ಸ್ವಾತಿಯೋಳ್
ಶ್ರೀದಕಾರ್ಪರ ನಾರಶಿಂಹ ವಿಠ್ಠಲನ ಪದ
ಸಾದರದಿ ಧೇನಿಸುತ ಮೇದಿನಿಯ ತ್ಯಜಿಸಿ ೫

## ೬೦

ಗುರುಕೂರ್ಮಚಾರ್ಯರ ಚರಣಕಮಲಯುಗ್ಮ
ನಿರುತ ಸ್ಮರಿಸು ಮಾನವ ಪ

ಧರಣಿಯೊಳಗೆ ಸುಕ್ಷೇತ್ರಗಾಲವ
ಪುರದಿ ಶ್ರೀ ನರಶಿಂಹಾ ಚಾರ್ಯರ
ತರುಣಿಯಳ ಗರ್ಭಾಬ್ಧಿಯಲಿಹಿಮ
ಕರನ ತೆರದಲಿ ಜನಿಸಿಮೆರೆದ ಅ.ಪ

ವರಕೊಲ್ಹಾಪುರದಿ ಪೋಗಿರಲು ಸುಂದರವಾದ
ಸಿರಿಯರೂಪವ ಕಾಣುತ್ತ
ಅರಿತು ಪ್ರಾರ್ಥಿಸಲು ಶ್ರೀ ನರಶಿಂಹಾರ್ಯರಿಗೊಲಿದು
ಕರುಣದಿಂದಲಿ ಕೊಟ್ಟಂಥ ಚರಣಕವಚ
ಸ್ವರಣ ಸಂಪುಟದಲ್ಲಿ ನಿರುತ ಪೂಜೆಯ ಮಾಡುತ್ತ
ಪ್ರವಚನಾಸಕ್ತ ಧರೆಯೊಳಗೆ ಬಹು
ಶರಣು ಜನ ರಘ ತರಿದು ಸೌಖ್ಯವ ಗರಿವುದಕೆ ಸಂ
ಚರಿಸುತಲಿ ಸಚ್ಛಾಸ್ತ್ರ ಮರ್ಮವ ನರುಹಿಜನರನುದ್ಧರಿಸಿದಂಥ ೧

ಪೊಳೆವ ಫಾಲದಿ ಪುಂಡ್ರ ತಿಲಕ ಮುದ್ರಾಕ್ಷತಿ
ವಿಲಸಿತ ಶುಭಗಾತ್ರದಿ
ಅಲವ ಬೋಧರ ಮತದೊಳು ತತ್ವಬೋಧಕ
ಸುಲಲಿತೋಪನ್ಯಾಸದಿ
ಬಲು ವಿಧಾರ್ಥವ ಪೇಳಿಕುಳಿತಪಂಡಿತರನ್ನು
ಒಲಿಸುತಿರೆ ಪೂರ್ವದಿ ಪಂಢರಪುರದಿ
ಗಲಗಲಿಯ ಸದ್ವಂಶ ಭವ ಮುದ್ಗಲಾಚಾರ್ಯರಿ
ಗೊಲಿದು ಬಂದಿಹ ಚಲುವ ವಿಠ್ಠಲ ಮೂರುತಿಯ ಪದ
ಜಲಜ ಮಧುಕರರೆನಿಸಿದಂಥ ೨

ಜಡಜಾಪ್ತನುದಯದಿ ನಡೆದು ದ್ವಿಜಗೃಹದೇವ
ರಡಿ ಗೊಂದನೆಯ ಮಾಡುತ್ತ
ಎಡೆಬಿಡದಲೆ ತಮ್ಮ ಅಡಿಗೊಂದಿಸುವ ಭಕ್ತ
ಗಡಣವ ಮನ್ನಿಸುತ ಬಿಡದೆ ಶತತ್ರಯ
ಕೊಡ ಜಲದಲಿ ಸ್ನಾನ ದೃಢಮನದಲಿ
ಮಾಡುತ್ತ ತಂತ್ರ ಸಾರೋಕ್ತ
ಎಡಬಲದಿ ಶೇವೆಯನು ಮಾಡುವ
ಪೊಡವಿಸುರಕೃತ ವೇದ ಘೋಷದಿ
ಜಡಜನಾಭನ ಪೂಜಿಸುವ ಬಹು
ಸಡಗರವ ನಾನೆಂತು ಬಣ್ಣಿಪೆ ೩

ಭೂತಲದಲಿ ಶ್ರೇಷ್ಠವಾತ ಮಾತಾಂಬುಧಿ
ಶೀತ ಕಿರಣನೆನಿಸಿ
ಪ್ರಾತರಾರಭ್ಯ ಶ್ರೀನಾಥನೆ ಪರನೆಂಬೊ
ಶಾಸ್ತ್ರದಿ ಮನವಿರಿಸಿ
ಖ್ಯಾತ ಸತ್ಯಧ್ಯಾನ ತೀರ್ಥರೆಂಬುವ ಗುರು
ಪ್ರೀತಿಯ ಸಂಪಾದಿಸಿ ಪುತ್ರರಿಗೆ ಬೋಧಿಸಿ
ಪ್ರೀತಿಯಲಿ ಶಿಷ್ಯರಿಗೆ ಭಗವ
ದ್ಗೀತೆಯನು ಪ್ರತಿದಿನದಿ ಪೇಳುತ
ಪಾತಕವ ಪರಿಹರಿಸಿ ಪರಮ ಪು-
ನೀತ ಗಾತ್ರರ ಮಾಡಿ ಸಲಹಿದ ೨

ಧರೆಯೊಳಧಿಕಮಾದ ಗಿರಿ ವೇಂಕಟೇಶನ
ದರುಶನವನೆ ಕೊಳ್ಳುತ
ಗುರುವಾಜ್ಞೆಯಲಿ ಬಂದು ವರ ಸಭೆಯೊಳು ತಮ್ಮ
ಪರಿವಾರದಿಂದಿರುತ ವರಷ ಶಾರ್ವರಿಯೊಳು
ವರ ಮಾಘ ಪ್ರತಿಪದ
ಬರಲು ಧ್ಯಾನವ ಮಾಡುವ ಹರಿಪದಾಸಕ್ತ
ಪರಮ ಭಕುತಿಯಲಿಂದ ಶೇವಿಪ
ಶರಣು ಜನ ಮಂದಾರ ನೆನಿಸುತ
ಮೆರೆವ ಕಾರ್ಪರ ನಿಲಯ
ಶಿರಿನರ ಹರಿಯ ಪುರವನು ತ್ವರದಿ ಶೇರಿದ ೩

೬೧

ಸ್ಮರಿಸೋ ಆದರಿಸೋ ಆನಮಿಸೊ ಮಾನವನೆ
ಗುರುಪದವ ಪೊಂದು ಮುದವ ಹೇ ಮನವೇ ನೀ
ಸ್ಮರಿಸೋ ಪ

ಸ್ಮರಿಸು ಶರಣರ ದುರಿತ ತಿಮಿರಕೆ
ತರಣಿ ಸಮರೆಂದೆನಿಸಿ ದ್ವಿಜರೊಳು

ಮೆರೆದು ವಿಭವದಿ ಕರೆದು ಛಾತ್ರರ
ಪೊರೆದ ಐಕೂರು ನರಶಿಂಹಾರ್ಯರ ಅ.ಪ

ವರವೆಂಕಟಾರ್ಯರ ತರುಣಿ ಸೀತಾಗರ್ಭ
ಶರಧಿಯಿಂದ ಜನಿಸಿದ ಶಶಿಯ ತೆರದಿ
ಧರಿಸಿ ವಿಪ್ರತ್ವವನು ಶೀಘ್ರದಿ
ಇರಿಸಿ ದ್ವಿತಿಯಾಶ್ರಮದಿ ಪದವನು
ಚರಿಸುತಲೆ ಸಾಧನಸುಮಾರ್ಗದಿ
ಕರೆಸಿದರು ವರಭಾಗವತರೆಂದು ೧

ಹರಿಪದದಲಿ ಮನವಿರಿಸಿ ದುರ್ವಿಷಯಧಿಃ
ಕರೆಸಿ ಧಿಃಕರಿಸಿ ಪ್ರಿತಾಜ್ಞಾನುಸರಿಸಿ
ಧರಣಿಯೊಳು ಗುರುಕರುಣದಿಂದಲಿ
ಮರುತ ಶಾಸ್ತ್ರವನರಿತು ಕರುಣದಿ
ಸರಸದಲಿ ಸಚ್ಛಾಸ್ತ್ರ ಮರ್ಮವ-
ನರುಹಿ ಜನರನುದ್ಧರಿಸಿದವರನು ೨

ನಿರುತ ಮಾಡುವ ಕರ್ಮ
ಹರಿಯೆ ಮೂಡಿಸುವನೆಂದರಿದು
ಅರಿದು ಧ್ಯಾನಿಸುತ ಮೈಮರೆದು
ಹರಿಯ ಗುಣಗಳ ಪೊಗಳಿ ಹಿಗ್ಗುತ
ಶರಣು ಜನ ಮಂದಾರ ಕಾರ್ಪರ
ಶರಣಶಿರಿ ನರಹರಿಯ ಪುರವನು
ತ್ವರದಿ ಸೇರಿದವರ ಸುಚರಿತೆಯ ೩

೬೨

ಸ್ಮರಿಸಿ ಸುಖಿಸು ಮನವೆ ಗುರುರಾಜಾಚಾರ್ಯರ ಪ

ಸ್ಮರಿಸು ಪರಿಮಳ ವಿರಚಿಸಿದ ಗುರು ವರರ
ಕರುಣವ ಪಡೆದ ಶರಣರ ದುರಿತ

ಉರಗಕೆ ಗರುಡನೆನಿಸಿದವರ ಸುಚರಿತೆಯ
ಹರುಷದಿಂದಲಿ ಅ.ಪ

ಇಳಿಯೊಳ್ ಶ್ರೀ ಸುರಪುರದಿ
ಯಳಮೇಲಿ ಶ್ರೀ ವಿಠ್ಠಲಚಾರ್ಯ
ರಿಹ ಜನ್ಮದಿ ಕುಸುಮೂರ್ತಿ ಗುರುಗಳ
ಒಲಿಮೆ ಪಡೆದು ನಿತ್ಯದಿ ಗಳಿಸಿದ
ಸುಪುಣ್ಯದಿ ಲಲನೆ ಜಾನಕಿ ವರ
ಸುಗರ್ಭದಿ ಚಲುವ ಲಕ್ಷಣ
ಗಳಲಿ ಜನಿಸಿ ಗೆಳೆಯರೊಡನಾಡುತಲೆ
ಶಬ್ದಾವಳಿ ಸುಶಾಸ್ತ್ರವ ಕಲಿತ ವರಪದ ೧

ಎರಡನೆ ಆಶ್ರಮದಿ ಪದವಿಟ್ಟು ನೋಡಲು
ಮೆರೆವ ಘನ ವೈಭವದಿ ವೈರಾಗ್ಯಭಾಗ್ಯವೆ
ಪಿರಿದೆಂಬೊ ಧೃಢಮನದಿ ವನಿತಾದಿ ವಿಷಯದಿ
ತಿರುಗಿಸುತ ಮನವಿರದೆ ಸಿರಿವರ ತುರುಗವದನನ
ಚರಣ ಪೂಜೆಯೊಳಿರಿಸಿ ಗುರುವರ ಮುಖದಿ ಶ್ರೀ
ಮನ್ಮರುತ ಶಾಸ್ತ್ರದ ಶ್ರವಣಗೈದರ ೨

ವರ ವಿದ್ಯಾವಂತರೆನಿಸಿ ವಿದ್ಯಾರ್ಥಿಗಳನುಪ
ಚರಿಸಿ ಶಾಸ್ತ್ರವ ಬೋಧಿಸಿ ಪ್ರವಚನದಿ
ಗುರುಗಳ ಕರುಣವ ಸಂಪಾದಿಸಿ
ನೃಪಮಾನ್ಯರೆನಿಸಿ ಹರಿದಿನಾದಿ
ವೃತ ಬಿಡದಾಚರಿಸಿ ಕಾರ್ಪರ ನಿಲಯ
ಶಿರಿನರ ಹರಿಯ ಪುರವನು ತ್ವರದಿ
ಶೇರಿದ ಪರಮ ಮಹಿಮರ ಚರಣ ಯುಗಲವ ೩

## ಆತ್ಮನಿವೇದನೆಯ ಕೀರ್ತನೆಗಳು

### ೬೩

ಏನು ಸಾಧನ ಮಾಡಿ ಕೃಷ್ಣನ ಕರವ ಸೇರಿತೋ
ಸುಖಪೊಂದಲು ಪ

ಸಾನು ರಾಗದಿ ಶ್ರವಣ, ಮನನ ಧ್ಯಾನಗೈದಿತೋ
ಬಹು ಜನ್ಮದಿ ಅ.ಪ

ದೇವದಾರು, ಅಗರು, ಚಂದನ, ಮಾವು, ಚಂಪಕ,
ಹರಿ ತೋಷಕ
ಸಾವಿರಾರು ತರುಲತೆಗಳೀ ವಸುಧಿಯೊಳಿರಲೂ
ಬಿದಿರಿನಕೊಳಲು ೧

ಮುರಮರ್ದನನ ಅಭಯ ಕರದವರ
ಪ್ರಸಾದವ ಕಮಲೋದ್ಭವ
ಸ್ಮರರಿಪು ಮುಖಸುರರು ಬೇಡಲು ದೊರೆಯದೀ
ವಿಭವ ವಂಶೋದ್ಭವ ೨

ತ್ರಾಣವೇನು ಮುರಲಿಗೆ ಶ್ರೀ ಹರಿಯ ವದನದೊಳು
ಸುಧೆ ಸವಿಯಲು
ಶ್ರೀನರಸಿಂಹನರಾಣಿ ತಾನೆ ವೇಣುರಂಧ್ರದೊಳು
ನಿಂದಿರುವಳು ೩

### ೬೪

ಕರುಣಿಸು ನರಹರಿಯೇ ಸ್ಮರಣಿಯ
ಕರುಣಿಸು ನರಹರಿಯೇ ಪ

ಕರುಣಿಸುವದು ತವಸ್ಮರಣೆ ನಿರಂತರ
ಧರಣಿ ಸುರಪ್ರಿಯ ಚರಣಕೆರಗುವೆನು ಅ.ಪ

ಶರಣರ ಸುರತರುವೇ ಕರುಣಾ
ಶರಧಿ ಶಿರಿಯಧೊರೆಯೆ
ಸರಸಿಜ ಭವಮುಖರರಸನೆ ತವಪದ
ಸರಸಿಜದಲಿ ಮನವಿರಿಸುವಂತೆ ಜವ ೧

ಕಂದನನುಡಿಕೇಳಿ ಸ್ತಂಭದಿ
ಬಂದಿಯೊ ವೇಗದಲಿ
ವಂದಿಸುವೆನು ಭವಬಂಧ ಬಿಡಿಸಿ ಮನ
ಮಂದಿರದಲಿ ತವ ಸಂದರುಶನವನು ೨

ಚಾರು ಕೃಷ್ಣ ತೀರಾಕಾರ್ಪರಾ
ಗಾರನೆ ಸ್ಮರಿಸುವರ
ಘೋರದುರಿತ ಹರನಾರಸಿಂಹ ನಿ
ನ್ನಾರಧಕರೊಳು ಸೇರಿ ಸುಖಿಸುವಂತೆ ೩

## ೭೫

ಚಿಂತಿಸುತಿರು ಮನವೇ ಸಿರಿಕಾಂತನಂಘ್ರಿಯ
ಚಿಂತಿಸು ಮನವೆ ನಿರಂತರ ಶ್ರೀಮದ
ನಂತಗಿರಿಯಲಿ ನಿಂತು ಭಜಕರ
ಚಿಂತಿತಪ್ರದ ನಂತಶಯನನ ಅ.ಪ

ಶಾಂತ್ಯಾದಿ ಗುಣಭರಿತ ಮಹಂತ ಮುನಿ ಮಾ
ರ್ಕಾಂಡೇಯಗೊಲಿದು ಸತತ ಪರ್ವತದಿ ಲಕ್ಷ್ಮೀ
ಕಾಂತನೆಸುರ ಸಹಿತ ಸನ್ನಿಹಿತನೆನುತ ಕಂತುಹರನುತ
ನಂತ ಮಹಿಮನ ಸಂತಸದಿ ಸಂತುತಿಸುತಲಿ ತ–

ಮ್ಮಂತರಂಗದಿ ಚಿಂತಿ ಸುವರಘಧ್ವಾಂತ
ದಿನಕರಾನಂತ ದೇವನ ೧

ನಾರ ಶಿಂಹನದರ್ಶನ ಕೊಳ್ಳುತಿರೆ ಮುನಿ ಬಲ
ದ್ವಾರದಿಂದಲಿ ಪ್ರತಿದಿನ ವಿರುತಿರೆ ಪ್ರಥಮ
ದ್ವಾದಶಿಯೊಳು ಸಾಧನ ತಕ್ಷಣ ಪ್ರಸನ್ನ
ಸೂರ್ಯಸುತನ ಉದಯದಲಿ ಭಾಗೀರಥಿಯು ಪು
ಷ್ಕರಣಿಯೊಳು ಬರೆ ಪಾರಿಜಾತದ ಭೂರುಹಂಗಳ
ಚಾರುರೂಪವ ತೋರಿದಾತನ ೨

ನೀರಜಾಸನ ವಂದಿತ ಬಂಗಾರಮಕುಟ
ಕೇಯೂರ ಕಂಕಣ ಭೂಷಿತ ಚಕ್ರಾದಿ ಚಿಹ್ನಿತ
ಚಾರುಶಿಲೆಯೊಳು ಸನ್ನಿಹಿತ ಭಜಕರನು ಪೊರೆಯುತ
ವಾರವಾರಕೆ ಭಕುತಜನ ಪರಿವಾರದಿಂ ಸೇವೆಯನು ಕೊಳ್ಳುತ
ಧಾರುಣಿಯೊಳು ಮೆರೆವ ಕಾರ್ಪರ ನಾರಶಿಂಹಾತ್ಮಕ ಸ್ವರೂಪನ ೩

## ೬೬

ದೇವಾ ಬಾರಯ್ಯಾ ವೈಭವದಿ ರಥವನೇರಿ
ಸೇವಿಸುವೆನು ಮಧ್ವಾವದಿ ನೆಲಸೆಂದು
ಪಾವನ ಮಣಿಪುರ ಠಾವಿನೊಳಿಹ
ಭೂದೇವ ವರ್ಯ ಸಂಶೇವಿತ ಕೇಶವ ಪ

ದೇವಗಂಗೆಯಪೆತ್ತ ಪಾವನಗಾತ್ರಧ್ರುವ
ಭೂವರೋಪಾಸಿತನಾಗಿ ಈ ವಸುಧಿಗೆ ಬಂದು
ಪಾವಮಾನ ಶಾಸ್ತ್ರದಿ ಕೋವಿದಯತಿ ವರ
ಶ್ರೀ ವಿದ್ಯಾನಿಧಿ ತೀರ್ಥ ಸೇವಿತ ಸಂಸ್ಥಾಪಿತ
ಸೇವಕ ಜನ ಸಂಭಾವಿತ ಕಾಮಿತ ವೀವ
ಕಾವ ಸದಶಾವತಾರ ನಮೋ ಶ್ರೀವಿರಂಚಿಮುಖ
ದೇವನ ಮಿತ ಕಂಚೀವರದನೆ ಪೊರೆ ಶ್ರೀ ವರಕೇಶವ ೧

ಕಡು ಶೋಭಿಸುವ ಬಿಳಿಗೊಡೆ ಚಾಮರಾದಿಗಳ
ಪಿಡಿದು ಶೇವಿಪ ಜನರೆಡಬಲದಿ ಬರೆ
ಪೊಡವಿ ಸುರರು ಪಂಥವಿಡಿದು ವೇದಪಠಣ
ಬಿಡದೆ ಮಾಡುತ ಬರೆ ನುಡಿವ ವಾದ್ಯಗಳಿಂದ
ಸಡಗರದಲಿ ದ್ವಿಜಮಡದಿಯರಾರುತಿ
ಪಿಡಿದು ಬೆಳಗುತಿರೆ ಕಡು ವೈಭವದಲಿ
ಅಡಿಗೆರಗುವೆ ಪಾಲ್ಗಡಲ ಶಯನ ಮೂ-
ರಡಿ ರೂಪನೆ ಜಗದೊಡೆಯ ಕೇಶವ ೨

ನಂದ ತೀರ್ಥರ ಮತ ಸಿಂಧುವಿಗೆ ಪೂರ್ಣ
ಚಂದ್ರರೆನಿಪಯತೀಂದ್ರ ಸತ್ಯ ಪ್ರಮೋದ
ರಿಂದ ಪೂಜಿತ ಪದ ದ್ವಂದ್ವ ಮಧ್ಯದೊಳಿಹ
ಮಂದಾಕಿನಿಗೆ ಪಿತನೆಂದು ತೋರಿಸಿದಂಥ
ಇಂದಿರೆಯರಸನೆ ಮಂದರಧರ ಗೋ
ವಿಂದ ಪಾಹಿ ಮುಕುಂದನೆ ಬಾಬಾ-
ರೆಂದು ಕರೆವ ದ್ವಿಜ ವೃಂದಮಧ್ಯದಲಿ
ಶ್ಯಂದನ ವೇರಿದ ಸುಂದರ ಕೇಶವ ೩

ಅಂಬುಜನಾಭನೆ ನಿತಂಬದಿ ಪೊಳೆವ ಪೀ-
ತಾಂಬರ ಧೃತ ಶಾತಕುಂಭ ಮಕುಟವದ-
ನಾಂಬೋಜವನು ತೋರೋಕುಂಭೀನಸ ಪರಿಯಂಕ
ಶಂಭ್ವಾದಿನಮಿತ ನೀಲಾಂಬುಧ ನಿಭಗಾತ್ರ ಕಂಬುಚಕ್ರಸುತ-
ದಾಂಬುಜಧರ ಬಲು ಸಂಭ್ರಮದಲಿ ಮುನಿಕುಂಭಜ ಪೂಜಿತ
ನಂಬಿದ ಭಕುತ ಕದಂಬ ದುರಿತ ಕಾದಂಬನಿ ಪವನ ಕೃ
ಪಾಂಬುಧೆ ಕೇಶವ ೪

ಗರುಡ ಮಾರುತರಿಂದ ಪರಶೇವಿತನೆ ಬಾರೊ
ಶರಣು ಜನರ ಸುರತರುವೆ ಚನ್ನಕೇಶವ
ಧರೆಯೊಳಧಿಕ ಮಣಿಪುರ ಪಂಡಿತಾಗ್ರಣಿ

ವರದಾಚಾರ್ಯ ಸನ್ನುತ ಸರಸಿಜಾಸನ ಪಿತ
ಸಿರಿದೇವಿಯು ಈರೆರಡು ರೂಪದಲಿ
ಕರದೊಳಗಾರುತಿ ವರಚಾಮರಗಳ ಧರಿಸಿ
ಶೇವಿಪಳು ಸಿರಿ ' ಕಾರ್ಪರ ನರಹರಿ '
ರೂಪನೆ ಮಾಂ ಪೊರೆವುದು ಕೇಶವ ೫

೬೭

ನಾರಸಿಂಹ ಪರಿಪಾಲಯಮಾಂ ಸತತಂ ಭವ
ಕೂಪನಿ ಪತಿತಂ ಪ

ಘೋರ ದುರಿತಹರ ಚಾರುಚರಣಯುಗಲಂ ಪ್ರಣ
ಮಾಮಿ ತ್ರಿಕಾಲಂ ಅ.ಪ
ಕಾರ್ಪರ ಋಷಿಕೃತ ಘೋರ ತಪ: ಪ್ರೀತ ಅ–
ತ್ರಾವಿರ್ಭೂತ ಕಾರ್ಪರ ಗ್ರಾಮೋತ್ತೀರ ಗತಾಶ್ವತ್ಥ
ರೂ ಪೇಣ ಸಮಸ್ತ ಆರಾಧಕ ನಿಜಭಕ್ತ ಜ–
ನಾಭಿಷ್ಟ ವರ್ಷಣ ಸರ್ವೇಷ್ಟ ನಾರಾಯಣ ಮುನಿ
ಪೂಜಿತ ಸುರವ್ರಾತ ಸಂಸ್ತುತ ಶುಭಚರಿತ ೧

ಸಾಕ್ಷಾಚ್ಛೀರ ಪಿವೀಕ್ಷ್ಯಾದ್ಭುತರೂಪಂ ತವ ಪ್ರಕಟಿತ
ಕೋಪಂತ್ರ್ಯಕ್ಷಾದ್ಯಮರ್ತ್ಯೈ: ಪ್ರೇಷಿತಾಪಿ ಸ್ವಪತಾ ಶಂಕೆ–
ತೇವ ತಸ್ಥಾ ರಕ್ಷಿತವಾನಭಿ ವೀಕ್ಷ್ಯ ಪ್ರಹ್ಲಾದಂ ಕೃತ್ವಾಪ್ರ
ಸಾದಂ ಲಕ್ಷ್ಮೀಧವಖಿಲ ಶಿಕ್ಷಣ ತವಚರಿತಂ
ಜ್ಞಾಪಯಮೇ ಸತತಂ ೨

ಭಕ್ತಿಂದೇಹಿ ಪ್ರಶಸ್ತಾಂತ್ವಯಿ ಕೃಪಯಾ ಚಿಂತಿತ ದುರ್ವಿಷಯಾ
ಸಕ್ತಿಂಜಹಿ ಸದ್ಭಕ್ತ ಚಿತ್ತನಿಲಯ ಕಾಯಾಧವ ಪ್ರಿಯ
ತೃಪ್ತಿರ್ಮೇಸ್ತು ಭವತ್ಕಥಾಖ್ಯ ಸುಧಯಾ
ಶೃತಿಪುಟಸಂಭೃತಯಾ
ಮುಕ್ತಾ ಮುಕ್ತ ಸಮಸ್ತ ಜಗತ್ಕಾಯಾ ಸುರಗಣ ಸಂಶೇವ್ಯಾ ೩

ಪದ್ಮಾಜಾದಿನುತ ಸದ್ಗುಣ ಗಣ ಪೂರ್ಣ
ಸುಜನಾರ್ತಿಹರಣಾ
ಪದ್ಮಾಂಧವ ಮಾಮುದ್ಧರ ಸುಖಿಪೂರ್ಣ
ವೃಕ್ಷಾದವತೀರ್ಣ
ಮದೃತ್ತಿಮಿರ ಪ್ರದ್ಯೋತನಕಿರಣ ಸನ್ನಿಭಶುಭ ಚರಣ
ಪದ್ಮಾರ್ಚಿತ ಪದ ಪದ್ಮ ಸದಾ ಪೂರ್ಣ
ಷಡ್ಗುಣಸಂಪನ್ನ ೪

ಮಂಗಳ ಕೃಷ್ಣ ತರಂಗಿಣಿ ಕೂಲಸ್ಥ ಅಶ್ವತ್ಥೋದ್ಭೂತ
ತುಂಗವದನ ಬಹು ಶಾಲಿಗ್ರಾಮಗತ ಷೋಡಶ ಬಾಹುಯುತ
ಮಂಗಳಪ್ರದ ನರಸಿಂಹ ಕೃಪಾಪಾಂಗ ರಕ್ಷಿತ
ಮಾತಂಗ ಸಂಗೀತಪ್ರಿಯ
ಮಂಗಳತರಚರಿತ ಶತಿತತಿ ವಿಖ್ಯಾತ ೫

## ೬೮

ಪಾಲಿಸೆನ್ನನು ಶ್ರೀಲಕುಮಿವರ ಭೂಲೋಲಕಾರ್ಪರ
ದೊಳು ಪಿಪ್ಪಲತರು ಸುಮಂದಿರ ಪ

ಬಾಲತನದಿ ಜನಕನ ಬಹು ಕೀಳುನುಡಿಗಳನು ಸಹಿಸಿದ
ಬಾಲಗೊಲಿದ ನರಹರಿಯೆ ಕೃಪಾಳೊ ನಿಮ್ಮಯ
ಕಾಲಿಗೆರಗುವೆ ಅ.ಪ

ಸಾಲಿಗ್ರಾಮದಿ ನೆಲಸಿ ತರುವರ ಮೂಲದಿ ಸೇವಿಪರ
ಪಾಲಿಸಲೋಸುಗ ನಿರಂತರ ಕಾಲಕಾಲಗಳಲ್ಲಿ ಬಿಡದೆ
ವಾಲಗ ಕೈಕೊಳ್ಳುತ ಮೆರೆವ ಕಾಳಿಯಮದನನೆ ತವಪದ
ಕೀಲಾಜದಲಿ ಭಕುತಿಯ ೧

ಮಂದಜಾಸನಾದಿ ಸುರಗಣ ವಂದಿತ ಸುಚರಣ
ದ್ವಂದ್ವ ಭಜಕ ವೃಂದಪೋಷಣ ಸಿಂಧುಶಯನವಂದಿಪೆ ಭವ

ಬಂಧ ಬಿಡಿಸ್ಯಾನಂದಗರಿವ
ಸುಂದರ ಮೂರುತಿಯನು ಮನ
ಮಂದಿರದಲಿ ತಂದುತೋರಿಸಿ ೨

ನಾರದಾದಿ ಮುನಿ ಸುವರ್ಣಿತ ಉದಾರ ಚರಿತ
ನಾರಾಯಣ ಮುನಿಸು ಪೂಜಿತ ಧಾರುಣಿಯೊಳು ಘೋರ
ಕೃಷ್ಣಾತೀರ ಸಂಸ್ಥಿತ ಸೇರಿದ ಭಕುತರಿಗೆ ತ್ರಿದಶ
ಭೂರುಹ ಸಿರಿನರಸಿಂಹನೆ ೩

## ೬೯

ಬಾಗೀನಮಿಪೆ ಬೇಗಬಾರೋ ಶ್ರೀ ನರಹರಿಯೇ ಪ

ಭಾಗವತರು ನಿನ್ನ ಕೂಗಿ ಕರೆವರಯ್ಯ ಅ.ಪ

ನಾಗಶಯನೆ ನಿನ್ನ ನಾಗರಾಜನು ಸ್ತುತಿಸೆ
ಬೇಗಸಲಹಿದಿ ಬಂದು ನಾಗಾರಿವಾಹನ ೧

ಸ್ತಂಭದಿಂದಲಿ ಬಂದು ಡಿಂಭಗೊಲಿದವನೆಂದು
ನಂಬಿದ ಭಕುತರ ಹಂಬಲ ಪೂರ್ತಿಸಲು ೨

ಕಾರ್ಪರ ಋಷಿ ತಪಕೆ ಒಪ್ಪಿ ಭುವಿಯೊಳ್ ಬಂದು
ಪಿಪ್ಪಲ ತರುವಿನೊಳ್ ಇಪ್ಪ 'ಶ್ರೀನರಹರಿಯೇ' ೩

## ೭೦

ಬಾರೊ ಶ್ರೀವೆಂಕಟರಮಣ ತವಪಾ-
ದಾರಾಧಕರನು ಪೊರೆಯಲು ಕರುಣಾಪೂರ್ಣ ಪ

ಬಾರೋ ನಮಿಸುವೆ ಪೂರ್ಣ ಕೃಷ್ಣಾ
ತೀರದಲಿ ಮಾಂಡವ್ಯ ಋಷಿಗಳ
ಘೋರ ತಪಸಿಗೆ ಒಲಿದು ಗುಡೆಬಲ್ಲೂರು
ಮಂದಿರನೆಂದು ಕರೆಸುತ ಅ.ಪ

ಎಲ್ಲ ಕಡೆಗೆ ನೆಲೆಸಿರುವ ಸಿರಿ
ನಲ್ಲನೊಲಿಸಲು ತಪವನು ಗೈವ
ಬಲ್ಲಿದ ಮಾಂಡವ್ಯರಿರವ ಕಂಡು
ಗೊಲ್ಲರು ಮಾಡಿದರನು ದಿನ ಶೇವಾ
ಪುಲ್ಲನಾಭನು ದರುಶನವ ಮುನಿ
ವಲ್ಲಭಗೆ ತೋರಿಸಲು ಬೇಡಿದ
ಗೊಲ್ಲರೆನ್ನಯ ಭಕುತರವರಿಂದಲ್ಲಿ
ಪೂಜೆಯಗೊಳ್ವದೆಂದನು ೧

ಬಾರೊ ಬೇಗನೆ ದ್ವಿಜರಾಜ ಧ್ವಜ
ವೇರಿ ಪೊರೆದೆಯೊ ಬಂದು ಕರಿಯೆ ಕರಿ
ರಾಜ ತೋರೋ ಚವತರಣ ಸರೋಜಯುಗ್ಮ
ಸಾರಿ ಭಜಿಸುವ ಭಕುತರ ಕಲ್ಪ ಭೂಜ
ಮಾರಜನಕನೆ ಚಾರುಕನಕ ಕಿ
ರೀಟ ಕುಂಡಲಹಾರಪದಕ ಕೇಯೂರ ಸಾಲಂ–
ಕಾರ ವಪು ಶೃಂಗಾರದಲಿ ರಥವೇರಿ ಮೆರೆಯುತ ೨

ವೇದವೇದ್ಯನೆ ನಿನ್ನ ಪ್ರೇಮಾ ಪಡೆದ
ಪಾದ ಮಹಿಮೆಯ ವರ್ಣಿಸಿದ
ದೇವ ಶರ್ಮಾ ಬೋಧಾದಿ ಸದ್ಗುಣಧಾಮ ಪಾಹಿ
ಮೇದಿನಿ ವಿಬುಧ ಪೂಜಿತ ಪೂರ್ಣಕಾಮ
ಮೇದಿನಿಯೊಳು ಶ್ರೀದ ನಿನ್ನಯ
ಪಾದಯುಗಳವ ಕಂಡು ಹರುಷದಿ
ಪಾದುಕೆಯ ರಚಿಸಿದಗೆ ಒಲಿದ
ಅಗಾಧ ಮಹಿಮನೆ ಮೋದಗರೆಯಲು ೩

ಒಂದಿನ ನಿಶಿಯೊಳುತ್ಸವದಿ ದಣಿ
ದಂದು ಮಲಗಿರಲರ್ಚಕರು ದೇವಾಲಯದಿ
ಬಂದು ಚೋರರು ಅತಿಜವದಿ ನಿನಗೆ
ಪೊಂದಿಸಿದೊಡವೆ ಗಳನು ಚೌರ್ಯತನದಿ
ಮಂದ ಮತಿಗಳು ಒಯ್ಯುತಿರೆ ಖಳ
ವೃಂದಕಂಗಳು ಪೋಗೆ ತುತಿಸಲು
ಚಂದದಿಂ ಬರೆ ಹೇಮನಾಮವ
ಕುಂದದಲೆ ಮಾಡಿಸಿದರಾಕ್ಷಣ ೪

ನೀರಜಾಸನ ಮುಖ್ಯ ತ್ರಿದಶ ಗಣದಿಂ–
ದಾರಾಧಿತಾಂಘ್ರಿ ಪಂಕಜ ಭಕ್ತಪೋಷ
ಸೂರಿಜನರ ಸಹವಾಸ ಕೊಡು
ಧಾರುಣಿಯೊಳು ಕೃಷ್ಣ ತೀರನಿವಾಸ
ಬಾರೊ ನಿನ್ನನು ಶೇರಿದವರಘ
ವಾರಿವಾಹ ಸಮೀರ ಕಾರ್ಪರ
ನಾರ ಶಿಂಹಾತ್ಮಕನೆ ಯನ್ನಯ
ಘೋರ ಭವ ಭಯ ದೂರಮಾಡಲು ೫

## ೭೧

ಭಜರೆ ಮಾನಸ ದ್ವಿಜವರಗಮನಂ ಪ

ದ್ವಿಜಕುಲ ತೋಷಣಂ ಗಜವರ ಪೋಷಣಂ ಅ.ಪ

ವಿಜಯ ಸಾರಥಿಂ ಭಜಕೃಷ್ಣಮೂರುತಿಂ
ಭಜಕಾಮರತರುಂ ಕುಜನಕುಠಾರಂ ೧

ಹರಿಪದ ಸ್ಮರಣಂ ದುರಿತನಿವಾರಣಂ
ಸರಸಿಜ ಭವ ಮುಖಸುರನುತ ಚರಣಂ ೨

ಜಲಧಿಜಾರಮಣಂ ಬಲಿಕೃತ ಕರುಣಂ
ವಿಲಸತ್ಕಾರ್ಪರ ನಿಲಯ ನರಹರಿಂ ೩

೭೨

ರಂಗನಾಥ ಮಾಂ ಗಂಗಾಜನಕ
ತುಂಗ ಮಹಿಮ ಮಂಗಳಾಂಗ ಪಾಹಿ ಪ

ತಿಂಗಳ ತೇಜದಲಿ ಪೊಳೆಯುತ
ಕಂಗೊಳಿಸುವ ಮುಕುಟ ಮಂಡಿತ
ಬಂಗಾರದಾಭರಣ ಭೂಷಿತ
ಶೃಂಗಾರದಿ ರಥವನೇರುತ
ಮಂಗಳ ವಾದ್ಯಂಗಳುಲಿಯೆ
ರಂಗನಾಥ ಪ್ರತಿವರ್ಷದಿ
ತುಂಗಛತ್ರ ಚಾಮರ ಧ್ವಜ–
ನಂಗಳ ವಿಭವದಿ ಬರುತಿರೆ
ಕಂಗಳಿಂದ ನೋಳ್ಪ ಭಕ್ತ
ಜಂಗುಳಿ ಪಾಲಿಸಲೋಸುಗ
ಮಂಗಳಸಿರಿ ಜಾಲಹಳ್ಳಿ ಪುರನಿಲಯ ಪೊರೆ ಎನ್ನ ೧

ಹಿಂದಕೆ ಮುದಗಲ್ಲು ಪುರದಿ
ಬಂದಿಹ ಉಪ್ಪಾರ ಜನದಿ
ಬಂದು ಗೋಣಿಯೊಳಗೆ ಮುದದಿ
ನಿಂದಿಯೊ ಪದಮೆಟ್ಟೆ ಬೆಟ್ಟದಿ
ಅಂದಿನ ರಾತಿಯ ಸ್ವಪ್ನದಿ
ಸಂದರ್ಶನವಿತ್ತು ಪುರದಿ
ಮಂದಿರಕಾರ್ಯವ ಸೂಚಿಸ–
ಲಂದು ರಾಯಗೌಡನಿಂದ

ಬಂಧುರದಲಿ ನಿರ್ಮಿತ ಆ–
ನಂದನಿಲಯ ಮಂದಿರ ಮು
ಕುಂದನಂದ ಕಂದನೆ ಮದ್ ಹೃದಯದಲಿ ಸದಾತೋರೋ ೨

ವಾರಿಚರ ಮಂದರಧರ ಭೂ
ಚೋರಮಥನ ಘೋರರೂಪನೆ
ಚಾರು ಬ್ರಹ್ಮಚಾರಿ ವಾಮನ
ಶೂರ ಪರಶುರಾಮನೆ ನಮೊ
ಧಾರುಣಿ ಜಾವಲ್ಲಭ ಕಂ–
ಸಾರಿ ವಸನದೂರನೆ ಹಯ
ವೇರಿ ದುಷ್ಟ ದಿತಿಜರ ಭಯ
ದೂರ ಮಾಡಿ ಕಾವದೇವ
ಧಾರುಣಿಸುರ ಪರಿಪಾಲಕ
ವಾರಿಜಭವ ನುತ ಕಾರ್ಪರಾ–
ಗಾರವೀರ ನಾರಸಿಂಹ ನಮಿಸುವೆನು ರಮಾರಮಣ ೩

## ೭೩

ಶ್ರೀ ಶ್ರೀನಿವಾಸ ಭಕುತರ ಪೋಷ
ಮಾಂ ಪಾಹಿ ಸುರೇಶ ಪ

ಆರಾಧಕ ಪರಿವಾರವ ಪೊರೆಯಲು
ಧಾರುಣಿಯೊಳು ಶಿರಿವರನಿವಾಸ ಅ.ಪ

ವಾರಿಜೋದ್ಭವ ಮುಖಸುರ ಸಂಶೇವ್ಯಫಣಿ
ರಾಜ ಸುಶಯ್ಯಾ ಸೇರಿಸೇವಿಪರಘ ತಿಮಿರಕೆ
ಸೂರ್ಯ ನೀರದ ನಿಭಕಾಯ ಧಾರುಣಿ ಸುರಪರಿ
ವಾರ ಸುಪೂಜಿತ ಮಾ ರಮಣನೆ
ಗುರುಮೂರುತಿ ಪ್ರಿಯ ೧

ಕಂದರ್ಪನಯ್ಯ ಕವಿಜನಗೇಯ ಬಂಧುರ ಶುಭನಿಲಯ
ನಂದನಂದನ ಮಾಮುದ್ಧರ ಕೃಪಯಾನಾಮುಗಿವೆನು ಕೈಯ್ಯಾ
ಇಂದಿಗೂ ಬುಧ ಜನರಿಂದ ವೈಭವದಿ ಸ್ಯಂದನವೇರಿದ
ಸುಂದರಕಾಯಾ ೨

ಇಳಿದೇವಾರ್ಪಿತ ಶ್ರೀ ತುಳಸಿಯ ಹಾರ ಪೀತಾಂಬರಧಾರ
ಪೊಳೆವಾ ಕುಂಡಲ ಮುಕುಟಾಲಂಕಾರ ಭೂಷಿತ ಶರೀರಾ
ಜಲಧಿ ಶಯನ ಮಂಗಳ ರೂಪನೆಭವ
ಜಲಧಿಯ ದಾಟಿಸೊ ಕಲುಷ ವಿದೂರ ೩

ಕೃಷ್ಣರಾಯಾನೆಂಬುವ ಸದ್ಭಕ್ತ ಇರುತಿರಲು ವಿರಕ್ತ
ಸಾಷ್ಟಾಂಗ ನಮಸ್ಕೃತಿ ಸೇವಾಸಕ್ತ ಗ್ರಾಮವ ರಕ್ಷಿಸುತ
ನಿಷ್ಠೆಯಿಂದ ಮನಮುಟ್ಟಿ ಭಜಿಸುತಿರೆ ಥಟ್ಟನೆ ವಲಿದಖಿ
ಲೇಷ್ಟ ಪ್ರದಾತಾ ೪

ದೇಶಾದಾಗತ ಭಕುತರ ಅಭಿಲಾಷಾ ಪೂರೈಸಲು ಅನಿಶಾ
ವಾಸಾ ಮಾಡಿದಿ ಗಿರಿಯೊಳು ಸರ್ವೇಶ ಕೊಡು ಸತ್ಸಹವಾಸ
ದೇಶದಿ ಕಾರ್ಪರವಾಸ ಲಕ್ಷ್ಮಿನರಕೇಸರಿ ರೂಪನೆ
ಶೇಷಗಿರೀಶ ೫

## ೭೪

ಶ್ರೀಧವ ಮಾಮವ ಪ್ರಣತ ಜಾನರ್ತಿ ಹರಭೋ
ಭೂಧರಜಾವರನುತಪದ ಪ

ಸಾದರದಲಿ ನಿನ್ನಾ ಪಾದವ ಭಜಿಸುವೆ ನಾ
ಮೋದವ ಕೊಡು ಕರುಣಾಂಬೋಧಿಯೆ
ಮಧು ಮಥನಾ ಸದಾಮಲಾಚರಿತನೆ
ಒದಗಿಸುತವ ಪದದಲಿ ಮನ ೧

ನತಜನ ಕೃತ ಕರುಣಾ ಶ್ರೀತಜನರಘಹರಣ
ಶೃತಿಗಣನುತ ಶರಣಾಗತ ಜನವತ್ಸಲನ
ನತಿಸುವೆ ಸತತದಿ ರತಿಪತಿ ಪಿತಕರ
ಪಿಡಿವದು ೨

ಧರಿ ಸುರ ಜನ ಪ್ರಿಯಾ ಕರುಣದಿ ಭವಮಾಯಾ
ಪರಿಹರಿಸೆಲೊ ಜೀಯಾ ವರಕಾರ್ಪರ ನಿಲಯಾ
ನರಹರಿ ವಿಠಲನೆ ವರಪಿಪ್ಪಲತರು ಸಂಸ್ಥಿತ ೩

## ೭೫

ಶ್ವೇತಗಿರಿನಿವಾಸ ಕೇಶವ ನೀಡೆನಗೆ ಮುದವಾ ಪ

ಭೂತಳದಿ ಪ್ರಖ್ಯಾತವಾದ ಶ್ವೇತಗಿರಿನಿವಾಸಯನ್ನ
ಪಾತಕ ವಾರಿಧಿಗೆ ಕುಂಭ ಜಾತನೆನಿಸಿ
ಪೊರಿಯೊ ದೇವಾ ಅ.ಪ

ಭೂತನಾಥ ನಿಮ್ಮಯ ಪದ
ಪಾಥೋರುಹ ಭಜಿಪ ಸತತ
ಸೀತ ಲಕ್ಷ್ಮಣ ರಘು ನಾಥನು
ಸಂಚರಿಸಿದಂಥ ೧

ಸಪ್ತುಋಷಿಗಳಿರುವ ಕೃಷ್ಣಾ
ಚೋತ್ತರ ವಾಹಿನಿಯ ಸ್ನಾನ
ಕ್ಷೇತ್ರಕಾಶಿಗಿಂತ ಫಲದಿ
ಉತ್ತಮವೆಂದೆನಿಸಿದಂಥ ೨

ಶ್ರೀಮನೋಹರ ನಿಮ್ಮಯ ಪದ
ತಾಮರಸವ ಪೂಜಿಸಲು

ಸೂತ್ರಾಮ ಲೋಕದಿಂದ ಬರುವ
ಕಾಮಧೇನು ಚರಿಸಿದಂಥ ೩

ಅಷ್ಟತೀರ್ಥಂಗಳಿರುವ
ಶ್ರೇಷ್ಠಸ್ಥಾನವೆಂದು ತಿಳಿದು
ನಿಷ್ಠೆಯಿಂದ ಸೇವಿಸುವರ
ಭೀಷ್ಟಗಳನ್ನು ಸಲಿಸುವಂಥ ೪

ಶ್ವೇತರಾಜ ತಪವಗೈದು
ಪೂತವಾದ ಪದವಿ ಪಡೆದ
ಆ ತರುವಾಯದಲಿ ಗಿರಿಯು
ಶ್ವೇತನಾಮದಿಂದ ಮೆರೆಯೆ ೫

ಸ್ಕಂದ ಪುರಾಣೋಕ್ತ ಮಹಿಮೆ
ಅಂದವಾಗಿ ತಿಳಿದು ಭಕುತಿ
ಯಿಂದ ಶೇವಿಪ ಮನುಜಗೆ ಭವ
ಬಂಧ ಬಿಡಿಸ್ಯಾನಂದ ಗರಿವ ೬

ತುಂಗಗಿರಿಯ ಸ್ಥಾನದಲ್ಲಿ
ಶೃಂಗನೆಂಬ ಋಷಿಯು ತಪದಿ
ಮಂಗಳ ಪ್ರದ ಕಾರ್ಪರನರ
ಸಿಂಗನೊಲಿಸಿ ವರವ ಪಡೆದ ೭

## ೭೬

ಸಂತತ ಶ್ರೀಮದನಂತ ಗಿರೀಶನ ಚಿಂತಿಸುತಿರು
ಮನವೆ ಪೇಳುವೆ ಪ

ಅಂತರಂಗದಲಿ ಚಿಂತಿಪರಘಕುಲಧ್ವಾಂತ
ದಿವಾಕರನಾ ಶ್ರೀವರನಾ ಅ.ಪ

ಎಂತು ಸುಕೃತವೂ ಸಿರಿಕಾಂತನುಯನ್ನೊಳು
ನಿಂತಿರುವನು ಎನುತ ಪರ್ವತ
ಸಂತೋಷದಲಿರುವಂತೆ ತೋರುವದು ಸು–
ಕಾಂತ ಶಿಖರದಿಂದ ಛಂದ ೧

ವರಶಿಲೆಯೊಳಿರುವ ಹರಿಯ ಶೇವಿಸಲು
ಹರುಷದಿ ಸುರನಿಕರ ಭಾಸುರ
ತರುಲತೆರೂಪದಿ ಇರುತಿಹರೆನ್ನುತ
ಮೆರೆವನು ಗಿರಿರಾಜಾ ಸುತೇಜಾ ೨

ಸರಸಿಜನಾಭಗೆ ಸರಿತಾನೆಂಬುವ ತೆರದಲಿ
ಗಿರಿನಾಥಾ ತೋರುತ ಅರಳಿದ ಪೂವಿನ
ಪರಿಮಳ ಬೀರುವ ಸುರಚಿರ ತರುವ್ರಾತಾ
ಶೋಭಿತ ೩

ಪವನ ಶೇವಿತನು ಭುವನೋದರ ತಾ
ದಿವಿಜರಿಂದ ಸಹಿತ ಸೇವಿತ
ಅವನಿಧರನು ಮಾಧವನ ತೆರದಿ ತೋ
ರು ವೆನೆಂಬುಗರ್ವಾದಿಂದಿರುವ ೪

ಸಿದ್ಧಚಾರಣ ತಪೋವೃದ್ಧರಿದೇ ಸ್ಥಳ
ಸಿದ್ಧಿದಾಯಕವೆಂದೂ ಬಂದೂ
ಪದ್ಮಾಕ್ಷನ ಪದಪದ್ಮವ ಧ್ಯಾನಿಸು–
ತಿದ್ದರು ಗುಹೆಗಳಲಿ ಪೂರ್ವದಲಿ ೫

ಮುನಿ ಮಾರ್ಕಾಂಡೇಯನು ಬಹುದಿನದಲಿ
ಘನ ತಪವಾಚರಿಸಿ ಸೇವಿಸಿ
ವನಜನಾಭನ ಪದವನಜ ಮಧುಪ ನೆಂ
ದೆನಿಸುತಲಿರೆ ಗುಹದಿ ತಪೋನಿಧಿ ೬

ಗಿರಿಯ ಬಲದಿ ಅಹೋಬಲ ನರಸಿಂಹನ
ದರ್ಶನವನು ಕೊಳುತ ನಿರುತ

ಇರುತಿರಲೊಂದಿನ ಬರಲಾಷಾಢದ
ಹರಿವಾಸರ ವ್ರತವಾ ಚರಿಸುವ ೭

ದ್ವಾದಶಿ ಸಾಧನೆ ಬರಲು ಪ್ರತಿದಿನದಿ
ಶ್ರೀದನ ದರ್ಶನದಾ ನೇಮದ ಸಾಧನೆ
ವಿಷಯದಿ ಯೋಚಿಸುತಿರೆ ಹರಿ
ಮೋದದಿ ಮುನಿಗೊಲಿದಾ ಸೂಚಿಸಿದಾ ೮

ಅರುಣೋದಯದಲಿ ಸುರಗಂಗೆಯು ತಾ
ವರ ಪುಷ್ಕರಣಿಯೊಳು ಬರುವಳು
ತರುರೂಪದಿ ನಾ ಬರುವೆನು ಬಿಡದಿರು
ಮರುದಿನದಾ ಚರಣ ಪಾರಣೆ ೯

ಎಂತು ಕರುಣವೊ ನಿರಂತರ ಭಜಿಪರ
ಚಿಂತಿತ ಫಲವೀವ ಕೇಶವ
ಇಂತು ಹರಿಯ ಗುಣ ಚಿಂತಿಸುತಿರಲು ನಿ
ಶಾಂತದಿ ಸರೋವರದಿ ವೇಗದಿ ೧೦

ಭಾಗೀರಥಿ ಜಲದಾಗಮ ವೀಕ್ಷಿಸಿ
ರಾಗದಿ ವಂದಿಸಿದ ತುತಿಸಿದ
ಯೋಗಿವರನುತ ಸ್ನಾನವಮಾಡಿ
ಬರುವಾಗಲೆ ಧ್ಯಾನಿಸಿದ ಹರಿಪದ ೧೧

ಆ ತರುವಾಯದಿ ಪಾರಿಜಾತ ತರು
ವ್ರಾತವ ನೋಡಿದನು ವಂದಿಸಿದನು
ಈತನೆ ನರಮೃಗನಾಥನೆನುತ ಮುನಿ
ಪ್ರಾತ: ಪಾರಣವ ಮಾಡಿದ ಜವ ೧೨

ಮೀಸಲು ಮನದಲಿ ಶೇಷಶಯನಗಾ-
ವಾಸಗಿರಿಯ ಸೇವಾ ಮಾಡುವ

ಭೂಸುರ ಗಣದಭಿಲಾಷೆಗಳನು
ಪೂರೈಸಿ ಪೊರೆವನೀತಾ ಪ್ರಖ್ಯಾತಾ ೧೩

ಶ್ರೀಯುತ ಮಾರ್ಕಾಂಡೇಯರ ಚರಿತೆಯ
ಗಾಯನ ಫಲವಿದನು ಪೇಳುವೆನು
ಶ್ರೇಯಸ್ಸಾದನ ಕಾಯದಿ ಬಲದೀ–
ರ್ಘಾಯುತ್ವವ ಪಡೆವ ಮಾನವ ೧೪

ಶರಣು ಜನರ ಸುರತರು ಕಾರ್ಪರ ಶಿರಿ
ನರಸಿಂಹನೆ ಈತ ಎನ್ನುತ
ನಿರುತ ಅನಂತನ ಗಿರಿಯ ಮಹಿಮೆಯನು
ಸ್ಮರಿಸುವ ನರಧನ್ಯಾ ಸನ್ಮಾನ್ಯ ೧೫

## ೭೭

ಸಾರಿದೆನೋ ನಿನ್ನ ವೆಂಕಟರಮಣ ಪ

ನಾರಪ್ಪಯ್ಯನಿಗೊಲಿದು ಗೋರೂಪದಲಿ ಬಂದಿಯೊ ಅ.ಪ

ಸುಂದರ ಶುಭಕಾಯಾ ಆಕಾಶರಾಜನ
ನಂದಿನಿಯಳ ಪ್ರೀಯ
ವಂದಿಸುವೆನು ಭವಬಂಧನ ಬಿಡಿಸಯ್ಯ ೧

ಕುರಕಿಹಳ್ಳಿಯ ಗ್ರಾಮದಿ ಶಿಲೆಯೊಳಗೆನಿಂದು
ವರಕೃಷ್ಣಾನದಿ ಜಲದೀ
ಅರುಣನುದಯದಲ್ಲಿ ನಿರುತ ಪೂಜೆಯಕೊಳುವಿ ೨

ನೀರದ ನಿಭಕಾಯಾ ಧರೆಯೊಳುಕೃಷ್ಣಾ
ತೀರ ಕಾರ್ಪರನಿಲಯಾ
ಘೋರ ಪಾತಕಹರ ನಾರಸಿಂಹಾತ್ಮಕನೆ ೩

## ಲೋಕನೀತಿಯ ಪದಗಳು

### ೭೮

ಚರಣಕಮಲ ಭಜಿಸೋ ಗೋಪಾಲಕೃಷ್ಣನ ಪ

ಮುರಲೀ ವಾದ್ಯದಲಿ ಗೋಪರನ
ತರುಣಿಯರ ಮನವನು
ಮರುಳುಗೊಳಿಸಿದ ಪರಮ ಸುಂದರನ ಧರಿಯೊಳಗೆ
ಭಾಸ್ಕರಪುರ ಸುಮಂದಿರನೆಂದು ಕರೆಸುವನ
ಕರಿರಾಜವರದನ ಅ.ಪ

ಕ್ಷೋಣಿ ಗೀರ್ವಾಣರಿಂದಲಿ ಪೂಜೆಗೊಂಬುವನಾ
ಮಾನಸದಿ ತನ್ನನು ಧೇನಿಪರ ಸುರಧೇನು ಎನಿಸುವನಾ
ಗಾನವನು ಕೇಳುವ ಧೇನು ವತ್ಸಗಳಿಂದ ಶೋಭಿತನಾ
ವೇಣುಗೋಪಾಲನ ೧

ವಂದನೆಯ ಮಾಳ್ಪರ ಬಂಧ ಬಿಡಿಶ್ಯಾನಂದ ನೀಡುವನಾ
ಮಂದರದಿ ಗಣಪತಿ ಗಂಧವಾಹನರಿಂದ ವಂದಿತನಾ
ಮಂದಜಾಸನ ಮುಖ್ಯ ಸುರಗಣದಿಂದ ಸೇವಿತನಾ
ಸಿಂದೂರವರದನ ೨

ಕೃಷ್ಣಾ ಅಷ್ಟಮಿಯ ಉತ್ಸವ ಮಾಳ್ಪ ಭಕುತರನಾ
ಸೃಷ್ಟೀಶನಿವನೆಂದರಿಂದ ಮಹಿಮೆಯ ಪಾಡಿಪೊಗಳುವನಾ
ಕಷ್ಟವನು ಪರಿಹರಿಸ್ಯವರ ಸಕಲಾಭೀಷ್ಟಗರಿಯುವನಾ
ಪರಮೇಷ್ಠಿ ಜನಕನ ೩

ಹರಿಮಹಿಮೆ ತಿಳಿಯದೆ ಸುರಪತಿಯ ಮಳೆ
ಗರಿಯೆ ಗೋಗಳನಾ

ರಕ್ಷಣೆಯ ಮಾಡಲು ಕಿರಿಯ ಬೆರಳಲಿ
ಗಿರಿಯ ಧರಿಸಿದನಾ ಇದ
ನರಿತು ಸುರಪನು ಸುರಭಿ ಸಹ ಬಂದೆರಗಿ
ಕೃಷ್ಣನ್ನ ಪೂಜಿಸಲು ಒಲಿದನ ೪

ಶರಣಾಗತ ಜನರ ಪೊರೆಯಲು ಬಂದುನಿಂತಿಹನಾ ಕಾ
ರ್ಪರ ಕ್ಷೇತ್ರದಿ ಮೆರಿವ ತರುಪಿಪ್ಪಲ ಸುಮಂದಿರನ
ಸುರವಿನುತ ಸಿರಿನರಹರಿಯ ರೂಪಾತ್ಮಕನು ಎನಿಸುವವನು
ತುರುಪಾಲ ಕೃಷ್ಣನ ೫

## ೭೯

ತಿರುಮಲೇಶನೆ ನಿನ್ನ ಚರಣ ಪಂಕಜಯುಗಲ
ನೆರೆನಂಬಿದವ ಧನ್ಯನೋ ಪ

ಗುರು ಮೂಲ ಪುರುಷ ನಾರಪ್ಪಯ್ಯ ಮುನಿಗೊಲಿದು
ಕುರಿಕಿಹಳ್ಳಿಯಲಿ ಬಂದಾ ನಿಂದಾ ಅ.ಪ

ವರಋಷಿಯ ಪೂರ್ವದಲಿ
ತಿರುಪತಿಯ ಮುಟ್ಟಿ ಮಲ–
ಗಿರಲು ಸ್ವಪ್ನವ ಕಾಣುತ
ತುರುರೂಪದಲಿ ನಾನೆ ಬರುವೆ ಕಾ–
ರ್ಪರ ವನಕೆ ದರುಶನವ ಕೊಡುವೆ
ನಿರುತ ಬರುತ ಬರುತಲಿ ವಿಪ್ರ
ತಿರುಗಿ ನೋಡಲು ಪದದಿ ಕಿರುಗಜ್ಜೆಗಳ ನುಡಿಸುತಾ
ಕುರಿಕಿ ಹಳ್ಳಿಯ ಸುಮಂದಿರನೆನಿಸಿ
ಸಿರಿಸಹಿತ ವರಶಿಲೆಯ ಮೇಲೆ ಪಾ
ಲ್ಗರಿದು ನೆಲೆಸಿರುವಂಥ ೧

ತೋಂಡಮಾನಕ್ಷಿತಿಪ ಪುಂಡಲೀಕಾದಿ ಬಹು
ತೋಂಡರಿಗೆ ಒಲಿದು ದೇವಾ
ಕುಂಡಲಿ ಪರ್ವತದಿ ತಂಡತಂಡದಿ ಭಕುತ
ಮಂಡಲಿಗೆ ಫಲವ ಕೊಡುವ
ದುಂಡುಮುತ್ತಿನಹಾರ ಮುಕುಟ ರತ್ನಾಭರಣ
ಮಂಡಿತನಾಗಿ ಮೆರೆವ
ಕಂಡೆನಾನಿಮ್ಮ ಪದ ಪುಂಡಲೀಕವನು ಈ
ಗುಂಡಿನಾ ತಿಮ್ಮಯ್ಯನೆಂದು ಕರೆಸಿಕೊಳುವಿ ೨

ಕರಮುಗಿವೆ ಮನ್ಮನದಿ
ಕರುಣದಲಿ ತೋರೋತವ
ಪರಮ ಸುಂದರ ಚರಣವ
ನಿರುತ ಸ್ಮರಿಸುವ ಜನರ
ದುರಿತ ತಿಮಿರಕೆ ದಿವಾ
ಕರನೆನಿಸಿ ಸುಖವಗರಿವಾ
ಸುರನಿಕರ ಸೇವ್ಯ ಕಾರ್ಪರನಿಲಯನೆನಿಸೆ ಬಹು
ಶರಣು ಜನರನು ಪೊರಿಯುವಾ
ವರಕೃಷ್ಣ ಗರ್ಭದಲಿ ಒಪ್ಪುವ ಪಿಪ್ಪಲಸ್ಥಶ್ರೀ
ನರಹರಿಯ ಬಳಿಯಲಿರುವಾಮೆರೆವಾ ೩

## ೮೦

ಧನ್ಯನಾಗೆಲೊ ಮುನ್ನ ಹರಿಯ ಕಾ
ರುಣ್ಯವನೆ ಪಡೆದು ಮಾನವನೆ ಪ

ಇನ್ನು ಸಂಸ್ಮೃತಿಯ ಬನ್ನ ಬಿಡಿಸುವ
ಪನ್ನಗಾರಿ ಧ್ವಜನನ್ನು ಧ್ಯಾನಿಸುತ ಅ.ಪ

ಕಣ್ಣಿನಿಂದಲಿ ನೋಡು ಹರಿಯಲಾವಣ್ಯ ಮೂರ್ತಿಯನು
ಕರ್ಣದಿಂದಲಿ ಕೇಳು ಹರಿಯ ಪಾವನ್ನ ಕೀರ್ತಿಯನು

ಅನ್ಯವಾರ್ತೆಗಳಾಡದೆ ವದನದಿ ಘನ್ನ ಹರಿಯಗುಣಗಳನ್ನೇ
ಬಣ್ಣಿಸುತ ೧

ಹಸ್ತವೆರಡು ಹರಿಮಂದಿರ ಮಾರ್ಜನಕೃತ್ಯ ಮಾಡುತಿರಲಿ
ಮತ್ತೆ ಪಾದಗಳು ಚಿತ್ತಜನಯ್ಯನ ಕ್ಷೇತ್ರ ತಿರುಗುತಿರಲಿ
ಚಿತ್ತವಿರಲಿ ಆಧ್ಯಾತ್ಮ ತತ್ವದಲಿ ಮತ್ತನಾಗದಲೆ
ಭೃತ್ಯನಾಗಿ ಬಲು ೨

ಇಂತು ಪಡಿಯೊ ಶಿರಿಕಾಂತನಲ್ಲಿ ಏಕಾಂತ ಭಕ್ತಿಯನು
ಸಂತತ ಹರಿಗುಣ ಚಿಂತನದಿ ವಿಷಯ
ಭ್ರಾಂತಿಯ ಬಿಡು ನೀನು
ಶಾಂತಮನದಿ ಗುರುಮಧ್ವಮತದ ಸಿದ್ಧಾಂತ
ಪೇಳುವ ಮಹಂತರ ಸೇವಿಸಿ ೩

ಸಾರ್ಥವಿದೆ ತಿಳಿ ಪಾರ್ಥಸಖನು ಸರ್ವತ್ರ ಇಹನೆಂದು
ಗಾತ್ರದೊಳು ಪ್ರತ್ಯಗಾತ್ಮನಲ್ಲಿ ಸದ್ಭಕ್ತಿಮಾಡು ತಿಳಿದು
ಮರ್ತ್ಯ ಜನ್ಮಕಿದು ಸಾರ್ಥಕವೊ ಸುಖತೀರ್ಥರ ಕರುಣಾ
ಪಾತ್ರನಾಗಿ ಬಲು ೪

ಈ ತೆರದಿ ಸಂಪ್ರಾರ್ಥಿಪರಿಗಿಷ್ಟಾರ್ಥಗಳ ಕೊಡುವಾ
ಭೂತಲದಿ ಪ್ರಖ್ಯಾತ ಕಾರ್ಪರ ಕ್ಷೇತ್ರದಲಿ ಮೆರೆವ
ಪಾತಕ ಹರ ಶಿರಿನಾರಶಿಂಹನ ಕೃಪಾತಿಶಯದಿ ನಿ
ರ್ಭೀತನಾಗಿ ಬಲು ೫

## ೮೧

ರಾಮನ ನೋಡಿರೈ ಮಂಗಳ ನಾಮನ ಪಾಡಿರೈ ಪ

ಭೂಮಿಯೊಳಾರ್ಯ ಅಕ್ಷೋಭ್ಯರ ಮಠದಿ
ಪೂಜಿತನ ಸೀತಾನ್ವಿತನ ಅ.ಪ

ತಾಮರಸ ಭವಾದ್ಯಮರ ಗಣ ಪ್ರಾರ್ಥನದಿ
ದಶರಥ ಗೃಹದಿ
ಶ್ರೀ ಮನೋಹರ ನವತರಿಸಿ ಭೂಭಾರವನಿಳುಹಿ
ಸುಜನರ ಸಲುಹಿ
ಪ್ರೇಮದಿ ಕುಶಲವರನುದಿನ ಪೂಜಿಪೆವೆಂದು
ಬೆಸಗೊಳಲಂದು
ರಾಮನು ಸ್ಮರಿಸಲು ವೈಕುಂಠದಿ ಬಂದಿಹನಾ
ಸೀತಾವರನಾ ೧

ಚಿಂತಿಸು ರಾಮನ ಶುಭಲಕ್ಷಣಗಳನೇಕ ಕರ್ಮವಿಪಾಕ
ಗ್ರಂಥದೊಳಷ್ಟಮ ಕಾಂಡದಿ ಚತುರಧ್ಯಾಯ
ದೊಳಗೀ ವಿಷಯಾ-
ದ್ಯಂತವಾಗಿ ವರ್ಣಿತವೆಂಬುವದನೆ
ಖರೆಯ ಯತಿಕುಲವರ್ಯ
ಕಾಂತ ಕರಜ ರಘುದಾಂತ ಕರಾರ್ಚಿತ
ಚರಣ ಸುಜನೋದ್ಧರಣ ೨

ಘನಶೋಭಿಸುವ ಕುಂದಣ ಮಣಿಮಯದ
ಕಿರೀಟ ಯುಕ್ತಲಲಾಟ
ಚಿನ್ಮಯಗಾತ್ರದಿ ಮಿನುಗುವ ರತ್ನಾಭರಣ ಜಿತರವಿ ಕಿರಣ
ಮನದೊಳು ಬಿಡದೆ ತನ್ನನು ಧೇನಿಪರಘ
ಹರಣ ಕರುಣಾಪೂರ್ಣ
ಮುನಿ ಸರ್ವಜ್ಞಕರಾಗತ ಲಕ್ಷ್ಮಣಯುತನಾ
ರಿಪುಕುಲಮಥನಾ ೩

ಮಂದಹಾಸ ಮುಖದಿಂದೊಪ್ಪುವ
ಶುಭಕಾಯಾಕವಿಜನಗೇಯಾ
ಸುಂದರ ಹೇಮ ಮಂಟಪದೊಳು ಪೂಜೆಯ
ಕೊಳುವ ಮನದೊಳು ಪೊಳೆವ
ನಿಂದಿರುವುದು ದ್ವಿಜವೃಂದ ಪಠಿಸುತಲಿ
ವೇದಾ ಮನಕತಿಮೋದಾ

ಹಿಂದಕೆ ಮಳಖೇಡ ಮಂದಿರವೆನಿಪ ಜಯಾರ್ಯ
ಮುನಿ ಸಂಶೇವ್ಯ ೪

ವರ್ಣಿಸಲೊಶವೆ ಶ್ರೀರಘು ಶಾಂತರ
ಶುಭಚರಿಯ ಬಹು ಆ
ಶ್ಚರ್ಯ ಪರಮಕ್ಷೇತ್ರ ಕೂಡಲಿಯೊಳಿರುವ
ಮಂದಿರದಿ ಪಾರಾ–
ಯಣದಿ ಇರುತಿರ ಲೊಂದಿನ ಕಿರುಗೆಜ್ಜೆಗಳ
ಸುನಾದ ಕೇಳಲು ಮೋದ
ತರುಳರೀರ್ವರತಿತ್ವರದಿ ಬರುತ ಸಮ್ಮುಖದಿ
ಪೊಕ್ಕರು ಗೃಹದಿ ೫

ಕಂಡರು ಮುನಿಪರು ಕೊಂಡಾಡುತ ಹರಿಗುಣವ
ಪೊಂದಿರೆ ಮುದವ
ತಂಡ ತಂಡ ಬಣ್ಣಿಸುತವರನು ಗೃಹದೊಳಗೆ
ಪುಡಕಿದರಾಗೆ ಬಾಲವ
ಕಾಣದೆ ಯೋಚಿಸಿದರು ಮನದೊಳಗೆ ತಿಳಿದರು
ಹೀಗೆ ಕುಂಡಲಿಶಯನ
ಶ್ರೀರಾಮನೆ ದರ್ಶನವಿತ್ತ ಲಕ್ಷ್ಮಣಸಹಿತ ೬

ಧರೆಯೊಳು ಬಹುಯತಿಕರ ಪೂಜಿತ ಪದಪದುಮಸ–
ದ್ಗುಣ ಧಾಮ ನಿರುತ ಶೇವಿಸುವ ಧರೆಸುರ ನಿಕರಕೆ
ಕೊಡುವ ಬೇಡಿದ ವರವ ಶರಣು ಜನಕೆ ಸುರ
ತರುವೆನಿಸಿದ ಸುರಪ್ರಿಯ ಕಾರ್ಪರನಿಲಯ ತರು
ಪಿಪ್ಪಲಗತ ಶಿರಿನಾರಸಿಂಹನೆ ಈತ ಶ್ರೀರಘುನಾಥಾ ೭

## ೮೨

ವೇದವ್ಯಾಸರ ದಿವ್ಯಪಾದ ಪದುಮಯುಗಲ
ಆರಾಧಿಸುತಿರು ಮನುಜಾ ಪ
ವೇದಗಳಿಗೆ ಸಮ್ಮತವಾದ ಪುರಾಣಗಳ
ಸಾದರದಲಿ ರಚಿಸಿ ಮೋದವ ಬೀರಿದ ಅ.ಪ

ಧರಿಯೊಳು ಸುಜನರಿಗೆ ವರಧರ್ಮ ತಿಳಿಸೆಂದು
ಸುರಮುನಿ ಪ್ರಾರ್ಥನದಿ
ಪರಮ ಮಂಗಲ ವೀರವರ ಭಾಗವತ ಗ್ರಂಥ
ವಿರಚಿಸಿ ಶುಕಮುನಿಗೆ ಕರುಣದಿಂದರುಹಿದ ೧

ವಾಸಿಪ ಮುನಿಗುಣ ಭೂಷಿತ ಬದರಿಯೋಳ್
ತೋಷ ತೀರ್ಥರ ಕರೆದು
ಭೂಸುರ ಜನರಿಗೆ ಮೋಕ್ಷದಾಯಕ ಸೂತ್ರ
ಭಾಷ್ಯವರಚಿಸೆಂದಾದೇಶವ ನೀಡಿದ ೨

ಅರಿದರಾದ್ಯಯುಧ ಧರಿಸಿ ಷೋಡಶಸಂಖ್ಯ
ಕರಗಳಿಂದಲಿ ಶೋಭಿತ
ಶರಣು ಜನಕೆ ಸುರತರು ವೆನಿಸಿ ಧರೆಯೊಳು
ಮೆರೆವ ಕಾರ್ಪರ ನರಹರಿ ರೂಪಾತ್ಮಕನಾದ ೩

## ತಾತ್ವಿಕ ಹಿನ್ನೆಲೆಯ ಪದಗಳು

### ೮೩

ಗೌರಿವರನೆ ಕಾಯೊ ಎನ್ನ
ಧಾರುಣಿಯೊಳು ರಾಯಕುಪ್ಪಿಸುಸದನ ಪ

ಮೂರುಲಿಂಗ ಸ್ವರೂಪದಲಿಯನ್ನ
ಮೂರು ತಾಪಗಳ ನೋಡಿಸಿ ಕರುಣದಲಿ
ಮೂರು ಸಾಧನವ ನೀಡುತಲಿ ಬಿಂಬಾ
ಮೂರುತಿಯನುಮನದಿ ಕಾಂಬುವಂದದಲಿ ೧

ಕರುಣಾ ಕಟಾಕ್ಷದಿ ನೋಡೋ ಸದಾ
ಕರಿವರದನ ಗುಣಗಳನೆ ಕೊಂಡಾಡೋ
ಹರಿ ಭಕುತರ ಸಂಗ ನೀಡೋ ಭವ
ಶರಧಿಯಿಂದೆನ್ನನುದ್ಧರಿಸಿ ಕಾಪಾಡೋ ೨

ಪಂಚಬಾಣನಗೆಲಿದಧೀರಾ ದ್ವಿ
ಪಂಚ ಕರಣಗಳಿಂ ಮಾಡಿಸು ಸದ್ವ್ಯಾಪಾರಾ
ಪಂಚಮುಖನೆ ಶ್ರೀಕಾರ್ಪರ ನರ
ಪಂಚಾನನಂಘ್ರಿ ಪಂಕಜ ಮಧುಕರ ೩

### ೮೪

ಸೇವಿಸೊ ಮನುಜಾ ನಿರಂತರ ಸುಖವೀವುದು
ಭಾಗವತದ ಸಾರ ಪ

ಪ್ರಶ್ನೆ: ಯಾತರಿಂದಲಿ ಕೇಳೆನ್ನಯಮನ ಬಹು
ಪೂತವಾಗುವದು ಗುರುವರೇಣ್ಯ

ಭೂತಳದಲಿ ಪರಮ ಪಾವನ ತೀರ್ಥ
ಯಾತ್ರೆ ಚರಿಸಲೇನು ಅನುದಿನ ೧

ಉತ್ತರ: ಶ್ರದ್ಧ ಪೂರ್ವಕ ಶ್ರವಣಸಾಧನ ಮನ
ಶುದ್ಧಿಗೆ ಇದೆ ಮುಖ್ಯ ಕಾರಣ
ಉದ್ಭವಿಸುವದು ಭಕ್ತಿ ಜ್ಞಾನ ಅನಿ
ರುದ್ಧನ್ನ ಪ್ರಾಪ್ತಿಗೆ ಸಾಧನ
ಪ್ರಶ್ನೆ:ವಶವಲ್ಲಭವದಿ ಬಂದೊದಗುವ ನಾನಾ
ವ್ಯಸನಗಳನು ಪರಿಹರಿಸುವ
ಬೆಸಸುವದೆನಗೀ ಉಪಾಯವ
ಚರಿಸಲೇನು ಗಿರಿಗುಹದಲಿ ತಪವ।
ಉ.ವಸುದೇವಸುತನ ಸಂಕೀರ್ತನ ನಾನಾ
ವ್ಯಸನ ಪರಿಹಾರಕ್ಕೆ ಕಾರಣ
ಮುಸುಕಿರ್ದ ಮೇಘಕ್ಕೆ ಪವಮಾನ ಭವ
ವ್ಯಸನಾಂಧಕಾರಕ್ಕೆ ರವಿಕಿರಣ ೨

ಪ್ರ:ಏನು ಮಾಡಲಿ ಸದುಪಾಸನ ದೈವಾ
ಧೀನದಿ ಬರುವ ವಿಘ್ನಗಳನ್ನು
ಕಾಣೆನು ಪರಿಹಾರ ಕೃತಿಯನ್ನು ಇದ
ಕೇನುಪಾಯನ ಪೇಳಿರಿ ಮುನ್ನ
ಉ:ಬಿಡದಿರೊ ಕೃಷ್ಣನ್ನ ಸ್ಮರಣವ ಬರುವ
ಯಡರುಗಳನು ಪರಿಹರಿಸುವ
ದೃಢಮನದಲಿ ತಿಳಿವದು ಜವ ಪೋಪ
ದ್ಯಡರು ಪ್ರಾಪಕವಾದ ಪಾತಕವ ೩

ಪ್ರ:ಮೋಕ್ಷಫಲದ ಕಮಲಾಕ್ಷಣ ಅಪ-
ರೋಕ್ಷ ವಾಗುವದಕ್ಕೆ ಸಾಧನ
ಶಿಕ್ಷಿಸುವದು ಸದುಪಾಸನ ಆ
ಪೇಕ್ಷಿಸುವೆನು ನಿಮ್ಮಯ ಕರುಣ

ಉ:ಆದರದಿ ನೈರಂತರ್ಯದಿ ಯುಕ್ತ
ಮಾಧವನಂಘ್ರಿಯ ಸ್ಮರಣದಿ
ಸಾಧಿತ ಬಿಂಬಾಪರೋಕ್ಷದಿಸ
ನ್ಮೊದ ಭರಿತನಾಗಿರು ಜಗದಿ ೪

ಪ್ರ:ಏನು ಮಾಡಲು ಮುಕ್ತಿಸಾಧನವಾದ
ಜ್ಞಾನ ವಿಜ್ಞಾನ ಸಂಪದವನ್ನ
ಕಾಣುವದೆಂದಿಗೆ ತಿಳಿಸೆನ್ನ ಮುಂದೆ
ಸಾನುರಾಗದಲಿ ಬೇಡುವೆ ನಿನ್ನ
ಉ:ಭಕ್ತಿ ವೈರಾಗ್ಯದಿ ಕೂಡಿದ ಪುರು
ಷೋತ್ತಮನಂಘ್ರಿ ಸಂಸ್ಮೃತಿಯಿಂದ
ಚಿತ್ತದಿ ಜ್ಞಾನ ವಿಜ್ಞಾನದ ಉತ್ಪ–
ತ್ತಿಯ ಪಡೆದು ಪೊಂದೆಲೊ ಮೋದ ೫

ಪ್ರ:ಜಲಜನಾಭನ ಪದಯುಗದಲ್ಲಿ ನಿ–
ಶ್ಚಲ ಭಕ್ತಿಯೆನಗೆ ಪುಟ್ಟುವದೆಲ್ಲಿ
ಬಲುವಿಧ ಭಕುತಿಯ ಬಗೆ
ಬಲ್ಲಿ ಇದನು ತಿಳಿಸುವದೆನಗೆ ನೀ ದಯದಲ್ಲಿ
ಉ:ಜ್ಞಾನ ವೈರಾಗ್ಯದಿ ಕೂಡಿದ ನಂದ
ಸೂನು ಪಾದಾಂಬುಜ ಸ್ಮೃತಿಯಿಂದ ಪ್ರಾ–
ಣೇಂದ್ರಿಯಾತ್ಮಾದಿಗಳಿಂದ ಅಧಿಕ
ಕಾಣಿಸುವದು ಭಕ್ತಿ ಜವದಿಂದ ೬

ಪ್ರ:ದೃಢತರವಾದ ವೈರಾಗ್ಯವ ಪೊಂದಿ
ಪಡಿವೆನೆಂದಿಗೆ ಮಾಧವನ ದಯವಾ
ಗಡನೆ ಪೇಳಿದಕೇನು ಪಾಯವ ನಿ–
ಮ್ಮಡಿಗಳಿಗೆರಗಿ ಬೇಡುವೆ ಮುದವಾ
ಉ:ಜ್ಞಾನ ಭಕ್ತಿಗಳಿಂದ ಕೂಡಿದ ಶಿರಿ
ವೇಣು ಗೋಪಾಲನ ಸ್ಮೃತಿಯಿಂದ

ಕಾಣುವಿ ಸಧೃಡ ವೈರಾಗ್ಯದ ಭಾಗ್ಯ
ಶ್ರೀನಿಧಿ ಚರಣಾನು ಗ್ರಹದಿಂದ ೭

ಪ್ರ:ಘನಲೌಕಿಕದಿ ಕೇಳೆನ್ನಯ ಮನ ನಿ–
ಪುಣತರವೆನಿಸುವ ದನುದಿನ
ಎನಗೆಂದಾಧ್ಯಾತ್ಮ ತತ್ವದಿ ಮನವೆರಗ
ಲೆನಿಸುವದದೆ ಮುಕ್ತಿಸಾಧನ
ಉ:ಅನುದಿನ ಶ್ರವಣಾದಿ ಸಾಧನ ದಿಂದ
ಜನಿತ ಸದ್ಭಕುತಿಯೆ ಕಾರಣ
ಮನದೊಳಾಧ್ಯಾತ್ಮ ತತ್ವಗಳನ್ನ ನೋಡಂ
ಜನಯುಕ್ತ ನಯನ ದಂದದಿ ಮುನ್ನ ೮

ಪ್ರ:ಏನಿರುವುದು ಬಿಂಬಲಕ್ಷಣ ಮತ್ತೇ
ನೇನು ಮಾಳ್ಪ ಕರ್ಮಗಳನ್ನು
ಸಾನುರಾಗದಿ ಪೇಳುವದುಮುನ್ನ ಮನದಿ
ಧ್ಯಾನವ ಮಾಡುವೆ ಪ್ರತಿದಿನ
ಉ.ಇಂತಿರುವದು ಬಿಂಬ ಲಕ್ಷಣ ಬಹಿ
ರಂತರದಲಿ ತಿಳಿವದು ಮುನ್ನ
ಸಂತತ ಸೃಷ್ಟ್ಯಾದಿಗಳನ್ನ ದೇ
ಹಾಂತಃ ಸ್ವಪ್ನದಿ ಸಂದರುಶನ ೯

ಪ್ರ.ಎಲ್ಲಿರುವನು ಬಿಂಬ ದೇಹದಿ ಸಿರಿ
ನಲ್ಲನು ವ್ಯಾಪ್ತವೆಂಬರು ಜಗದಿ
ಎಲ್ಲದೇಶ ಗುಣಕಾಲದಿಯನ್ನ
ಸೊಲ್ಲಿಗುತ್ತರವ ಪಾಲಿಸುದಯದಿ
ಉ: ನಿಂತಿರುವನು ಸರ್ವಜೀವರ ಹೃದ
ಯಾಂತರದಲಿ ವ್ಯಾಪ್ತನು ಪೂರಾ
ಸಂತತ ಜೀವನ ವ್ಯಾಪಾರ ತಾನೆ
ನಿಂತು ಮಾಡಿಸುವನು ನಿರ್ಧಾರ ೧೦

ಪ್ರ:ಎಂತು ಮಾಡಲಿ ಬಿಂಬೋಪಾಸನ ಮುಕ್ತಿ
ಪಂಥಕ್ಕೆ ಮುಟ್ಟಲು ಸೋಪಾನ ಅ–
ನಂತ ಗುಣಾತ್ಮಕ ಬಿಂಬನ ಗುಣ
ಚಿಂತಿಪರಿಗೆ ಬಂಧ ಮೋಚನ
ಉ: ಇದೆ ತಿಳಿಬಿಂಬೋಪಾಸನ ಚತು
ರ್ವಿಧ ದಿಂದಲಾತ್ಮ ಸಮರ್ಪಣ
ಮೊದಲು ಆತ್ಮಾನಮೇವಾರ್ಪಣ ದ್ರವ್ಯ
ಸದ್ಗುಣ ಕರ್ಮಸಮರ್ಪಣ ೧೧

ಪ್ರ: ಈ ವಿಧ ಬಿಂಬೋಪಾಸನ
ಮಾಡಲಾವ ಧರ್ಮಗಳ ಮಾಡಲಿ ಮುನ್ನ
ಜೀವರ ಬಂಧ ವಿಮೋಚನ ಮಾಳ್ಪ
ಶ್ರೀ ವರ ನೊಲಿಮೆಗೆ ಸಾಧನ
ಉ: ಶುದ್ಧ ಭಾಗವತ ಧರ್ಮಗಳನ್ನು ತಿಳಿದು
ಶ್ರದ್ಧೆಯಿಂದಲ್ಲಿ ಮಾಡೋ ಮುನ್ನ
ಹೃದ್ಗತ ಬಿಂಬೋಪಾಸಾನ ಮಾಡಿ
ಸಿದ್ಧನಾಗಿ ಬಾಳೆಲೋ ಮುನ್ನಾ ೧೨

ಪ್ರ: ಎಂತಿರುವದು ಗುರುಲಕ್ಷಣ ಮುಕ್ತಿ
ಪಂಥವ ತೋರಿಸುವವರನ್ನ
ಚಿಂತಿಸುವೆನು ಮನದೊಳುಮುನ್ನ ಭಗ
ವಂತನ ಮಹಿಮೆ ಪೇಳುವರನ್ನ
ಉ:ಜಲಜನಾಭನ ಪದಯುಗಲವ ಬಿಟ್ಟು
ಚಲಿಸದಿರು ಲವ ನಿಮಿಷಾರ್ಧವ
ಇಳಿಯೊಳಗಿಂಥಾ ಸದ್ವೈಷ್ಣವರನ್ನು
ತಿಳಿದು ಸೇವಿಸುತಿರು ಮಾನವಾ ೧೩

ಪ್ರ: ಏನು ಕೊಡಲಿ ಗುರುದಕ್ಷಿಣ ಈ
ಕ್ಷೋಣಿಯಿತ್ತರು ಸರಿಗಾಣೆ ನಾ

ಧ್ಯಾನವ ಮಾಡುವೆ ಪ್ರತಿದಿನಾ ಬಿಂಬ
ಜ್ಞಾನವ ಕೊಟ್ಟು ರಕ್ಷಿಪದನ್ನ
ಉಃಆತ್ಮಾರ್ಪಣ ಮೇವದಕ್ಷಿಣ ಸಿರಿ
ನಾಥ ನಿಂದನ್ನ ವಸ್ತುಗಳನ್ನು
ಪ್ರೀತಿಸರೆಂದಿಗೂ ಧನವನ್ನು ಈ ಮ–
ಹಾತ್ಮರ ಸ್ಮರಿಸುತಲಿರು ಮುನ್ನ ೧೪

ಕ್ಷೇತ್ರ ಕಾರ್ಪರದೊಳಗಿರುವಂಥ ಲಕ್ಷ್ಮಿ
ಯುಕ್ತ ನರಸಿಂಹನೊಲಿಸುವಂಥ
ಸ್ತೋತ್ರ ಮಾಲಿಕೆಯನ್ನು ಪಠಿಸುತ್ತ
ಕೃತ ಕೃತ್ಯನಾಗಿ ಬಾಳೆಲೊನಿರುತ

## ಕಥನಾತ್ಮಕ ಹಾಡುಗಳು

### ೮೫

ನೋಡಬನ್ನಿರಿ ಕಾರ್ಪರೇಶನ ಪಾಡಿರೈ ಸರ್ವೇಶನಾ
ರೂಢಿಯೊಳು ಶೇಷಾದ್ರಿನಿಲಯನ ಕೂಡಿಕೊಂಡಿಲ್ಲಿರುವನ ಪ

ಚಿಪ್ಪಗಿರಿ ದಾಸಾರ್ಯರೀತರು ಪಿಪ್ಪಲವ ಕಂಡಾಗಲೇ
ಕಾರ್ಪರಾರಣ್ಯೆಂಬ ಪದದಿ ಸಂಕ್ಷಿಪ್ತ ಮಹಿಮೆಯ ಪೇಳ್ದರು ೧

ಅಪರದಿಗ್ಭಾಗದಲಿ ನೋಡಲು ಸಪತ ಋಷಿಗಳ ಸ್ಥಾನವು
ತ್ರಿಪಥಗಾಮಿನಿ ವ್ಯಕ್ತಳಾದಳು ತಪಕೆ ವಿಶ್ವಾಮಿತ್ರರ ೨

ಯತ್ರಶ್ವೇತ ಶೃಂಗ ಕೃಷ್ಣಾಚೋತ್ತರ ವಾಹಿನಿಯೊಳು
ತತ್ತದಾನ ಸ್ನಾನ ಕಾಸಿಗೆ ಉತ್ತಮವು ಫಲವೀಯಲು ೩

ಚಾರುಕೃಷ್ಣಾತೀರವಿದರೊಳು ಕಾರ್ಪರಾಖ್ಯ ಮುನೀಂದ್ರನಾ
ಘೋರತಪ ಕೊಲಿದರಳೆ ಮರದಾಗಾರನೆನಿಸಿದ ಧೀರನ ೪

ನೀರಜಾಸನ ಮುಖ್ಯ ಸುರ ಪರಿಹಾರ ಸೇವಿತ ಚರಣನ
ಸೇರಿದವರಘ ದೂರ ಮಾಡುವ ಘೋರನರಹರಿ ರೂಪನ ೫

ಇಂತು ಅಶ್ವತ್ಥಾಂತರದಿ ಸಿರಿಕಾಂತನರಿಯನೆ ವಿಪ್ರರೊಳ್
ಶಾಂತ ನಾರಪ್ಪಯ್ಯನೆಂಬ ಮಹಾಂತರಿಲ್ಲಿರುತಿಪ್ಪರು ೬

ದೊಡ್ಡವರ ಗುರುತರಿಯದಿವರನು ದಡ್ಡರೆನ್ನುತ ಭ್ರಾತ್ರರು
ದೊಡ್ಡ ಕೃಷ್ಣಾನದಿಯೊಳಿವರನು ಕಟ್ಟಿ ಹಾಕಲು ಕೋಪದಿ ೭

ಕಡಲಶಯನನ ಕರುಣದಿಂದಲಿ ದಡಕೆ ಸೇರಿದನಂತರ
ದೃಢ ವಿರಾಗದಿ ವೆಂಕಟಾದ್ರಿಗೆ ನಡೆದರಾಗಲೆ ಹರುಷದಿ ೮

ವಿಠ್ಠಲನ ಶುಭ ಚರಣ ಪಂಕಜ ಷಟ್ಪದಾಯಿತ ಚಿತ್ತರು
ಕೃಷ್ಣನಿರುತಿಹ ಬೆಟ್ಟದಡಿಯನು ಮುಟ್ಟಿಮಲಗಲು ಸ್ವಪ್ನದಿ ೯

ಇಲ್ಲಿ ದರ್ಶನವಿಲ್ಲ ನೀವಿರುವಲ್ಲಿ ಪುಣ್ಯಸ್ಥಾನವು
ದುರ್ಲಭವು ಪಾಪಾತ್ಮರಿಗೆ ನೀನಲ್ಲಿ
ಪೋಗಿರೋ ಭೂಸುರ ೧೦

ಧೇನು ರೂಪದಿ ಬರುವೆ ಕಾರ್ಪರ ಕಾನನದ ಅಶ್ವತ್ಥದಿ
ಕಾಣುವುದು ಕ್ಷೀರಾಭಿಷೇಚನ ಧ್ಯಾನಿಸೆನ್ನನು ದ್ವಿಜವರ ೧೧

ಇಂತುಸ್ವಪ್ನದಿ ಸೂಚಿಸಿದ ವೃತ್ತಾಂತವನು ಸಂಚಿಂತಿಸಿ
ಕಂತು ಜನಕನ ಇಚ್ಛೆಯಿಂದಲೆ ಸಂತಸದಿ ಗಿರಿಗೊಂದಿಸಿ ೧೨

ಮುಂದೆ ನಡೆದರು ಹಿಂದೆ ಗೆಜ್ಜೆಗಳಿಂದ ಬರುತಿಹ ಗೋಗಳ
ದ್ವಂದ್ವ ರೂಪವ ನೋಡದಲೆ
ಗೋವಿಂದನಂಘ್ರಿಯ ಸ್ಮರಿಸುತ ೧೩

ಬರುತ ಬರುತಲೆ ತಿರುಗಿ ನೋಡಲು
ಕುರುಕಿ ಹಳ್ಳಿಯ ಗ್ರಾಮದಿ
ವರಶಿಲೆಯ ಮೇಲ್ಗರಿಯೆ ಪಾಲನು
ತಿರುಮಲೇಶನ ಕಂಡರು ೧೪

ತರುವರಾಶ್ವತ್ಥದಲಿ ಸಲೆ ಪಾಲ್ಗರಿಯೆ
ಗುರುತನು ಕಾಣುತ
ಗಿರಿಯ ವೆಂಕಟರಮಣ ತಾನಿಲ್ಲಿರಲು
ಬಂದನು ಎನ್ನುತ ೧೫

ನಿರುತ ಪೂಜೆಯ ಮಾಡುತಲೆ
ಮುನಿವರನು ಸುಖದಿಂದಿರುತಿರೆ
ತುರುಗಳನು ಶ್ರೀಹರಿಯ ಸೇವೆಗೆ ಶರಣು
ಜನರೊಪ್ಪಿಸು ತಿರೆ ೧೬

ಬಂದರಲ್ಲಿಗೆ ತಮ್ಮ ಗ್ರಾಮದ ಬಂಧು ಬಾಲಕರೆಲ್ಲರು
ಕಂದರಿಗೆ ಪೇಳಿದರು ಗೋಗಳ ವೃಂದ
ಕಾಯುವದೆನುತಲಿ ೧೭

ಚಾರು ಶಿಲೆಯೊಳಗೊಂದುದಿನ ಅಂಗಾರದಲಿ ಪ್ರಾಣೇಶನ
ಮೂರುತಿಯ ಬರೆದೀತ ಭಯ
ಪರಿಹಾರನುನಿಮಗೆಂದರು ೧೮

ಹಟ್ಟಿ ಹನುಮನ ಪಾದ ಪದುಮವ
ನಿಷ್ಠೆಯಿಂದಲಿ ಸೇವಿಸೆ
ಇಷ್ಟಗಳು ದೊರೆಯುವವು ಬುದ್ಧ್ಯಾದ್ಯಷ್ಟ
ಸಿದ್ಧಿಗಳಾಗ್ವವು ೧೯

ಮೂಲ ಪುರುಷರು ಅವರೆ
ನಾರಪ್ಪಯ್ಯರೆಂಬ ಮಹಾತ್ಮರು
ಕಾಲ ಕಾಲಗಳಲ್ಲಿ ಸ್ಮರಿಸಲು ಪಾಲಿಸುವ
ಹರಿ ಸಂತತ ೨೦

ವರ ವಿಜಾಪುರದರಸು ತನ್ನಯ
ಧರಣಿಯನು ಸಂಚರಿಸುತ
ಮೆರೆವ ಕರಿತುರಗಾದಿಸೈನ್ಯದಿ ಬರಲು
ಚೆನ್ನೂರ ಗ್ರಾಮದಿ ೨೧

ಧಾರುಣೀಶನ ಸೈನ್ಯದಲಿ ಭಯ
ತೋರಿತಂದಿನ ರಾತ್ರಿಯೋಳ್
ಸಾರಿದರು ಜನಘೋರ ಭಯಹರ ನಾರಸಿಂಹನ
ಮಹಿಮೆಯಾ ೨೨

ಎರಡನೆಯ ದಿನ ರಾತ್ರಿಯೊಳು ಮಲಗಿರಲು
ಭೂಪನ ಸ್ವಪ್ನದಿ

ಅರುಹಿದನು ವಟುರೂಪದಲಿ ನರಹರಿಯು
ತರುವನು ತೋರಿಸಿ ೨೩

ಕಟ್ಟಿಸೆಲೊ ಭೂಪತಿಯೆ ಮಂದಿರ ಕೃಷ್ಣವೇಣಿಯ ಗರ್ಭದಿ
ಪುಟ್ಟುವನು ವರಕುವರ ನಿನಗತಿ
ಶ್ರೇಷ್ಠನೆನ್ನಯ ಕರುಣದಿ ೨೪

ಸುಪ್ರಭಾತದಲೆದ್ದು ನೃಪತಿಯು ಸ್ವಪ್ನಸೂಚಿತ ಸ್ಥಾನವ
ಕ್ಷಿಪ್ರ ನೋಡುವೆನೆನುತ ಸೈನ್ಯದಿ ಕಾರ್ಪರಕೆ ಬಂದಿಳಿದನು ೨೫

ಆನೆಗಳು ಕಟ್ಟಿರುವ ಶಿಲೆಗಳು ಕಾಣಿಸುವ ವೀಗಾದರು
ಏನು ಧನ್ಯನು ನೃಪನು ನರಪಂಚಾನ
ನನಸೇವಿಸಿದನು ೨೬

ಬಂಧುರದ ಕಟ್ಟೆಯನು ಕಟ್ಟಿಸಿ
ಮಂದಿರವಮೇಲ್ ನಿರ್ಮಿಸಿ
ಇಂದಿರೇಶನ ಪದಕೆ ಭೂಸಂಬಂಧ ವೃತ್ತಿಯನೊಪ್ಪಿಸಿ ೨೭

ಹಿಂದೆ ನೋಡಲು ಚಂದ್ರಶೇಖರ ನಂದಿಪತಿ ಮಂದಿರಗಳು
ವಂದೇ ವತ್ಸರದೊಳಗೆ ಶಿಲ್ಪಿಗಳಿಂದ ಕಟ್ಟಿದ ಶಿಲೆಗಳು ೨೮

ಆ ಮಹಾ ವೃಕ್ಷದಲಿ ಸಾಲಗ್ರಾಮ
ವೃಷ್ಟಿಯ ಮಹಿಮೆಯ
ಪ್ರೇಮದಿಂದಲಿ ಕೇಳುವವರಿಗೆ
ಕಾಮಿತಾರ್ಥವನೀವುದು ೨೯

ಎರಡು ಶತವತ್ಸರದೊಳಗೆ ಬಂದಿರುವ
ಮಾಧವ ಮಾಸ ದೊ
ಳಿರುವ ದ್ವಾದಶಿ ದಿನದ ತರಣಿಯು ಶರಧಿ
ಸೇರುವ ಸಮಯದಿ ೩೦

ಅರಿದರಾದ್ಯಾಯುಧಗಳನು ತಾ ಧರಿಸಿಷೋಡಶ ಕರಗಳಿಂ
ಪರಮ ಸುಂದರ ನರಹರಿಯ ಮೂರುತಿಯು ಹೊರಟನು ವೃಕ್ಷದಿ ೩೧

ಸಕಲ ಯಾತ್ರೆಯ ಫಲವು ಲಭಿಸುವದಖಿಲ ತೀರ್ಥ ಸ್ನಾನದ
ಭಕುತಿಯಿಂದಶ್ವತ್ಥ ವೃಕ್ಷದಿ ವ್ಯಕತ ನರಹರಿ ದರ್ಶನ ೩೨

ದಕ್ಷಿಣಾಯನ ಪರ್ವದಲಿ ಈ ವೃಕ್ಷದೆಡೆಯಲಿ ಸ್ನಾನವು
ಮೋಕ್ಷ ಮಾರ್ಗಕೆ ಸಾಧನವು ಪ್ರದಕ್ಷಿಣಾದಿಕಮೆಲ್ಲವು ೩೩

ಮಂದಿರವ ಕಾಣುತಲೆ ಶ್ರೀಗೋವಿಂದ ಗೋವಿಂದೆನುತಲಿ
ಬಂಧು ವರ್ಗ ಸಮೇತ ಭಕುತರ ವೃಂದ ಬರುವದು ನೋಡಿರೈ ೩೪

ಪಾಲಿನಭಿಷೇಕದಿ ಅರ್ಚನ ಪಾಲಕಿಯ ಸೇವಾವಧಿ
ವಾಲಗವ ಕೈಕೊಳುತ ಭಕುತರ ಪಾಲಿಸುವ ನರಸಿಂಹನ ೩೫

ವಾರವಾರಕೆ ಭಕ್ತಜನ ಪರಿವಾರ ಸೇವೆಯಕೊಳ್ಳುತ
ಘೋರತರ ಸಂಸಾರ ಭಯಪರಿಹಾರ ಮಾಡುವ ದೇವನ ೩೬

ತಪ್ಪದಲೆ ಪ್ರತಿವರ್ಷ ದ್ವಿಜ ಸಂತರ್ಪಣಾದಿಗಳಿಂದಲಿ
ಕೊಪ್ಪರದಿ ನವರಾತ್ರ ಮೊದಲಾದುತ್ಸವಾದಿಗಳಾಗ್ವವು ೩೭

ಹಿಂದೆ ಚಾತುರ್ಮಾಸ್ಯ ಕಾಲವು ಬಂದಿರಲು ವಿಭುದೇಂದ್ರರು
ಬಂದರಿಲ್ಲಿಗೆ ಶಿಷ್ಯರಾದ ಯತೀಂದ್ರ ನಾರಾಯಣಾರ್ಯರು ೩೮

ಆ ಸಮಯದಿ ರಘುನಾಥ ತೀರ್ಥ ಯತೀಶರಿಲ್ಲಿಗೆ ಬಂದರು
ತೋಷದಲಿ ವಿಭುದೇಂದ್ರ ತೀರ್ಥಮುನೀಶರವರಿಗೆ ಪೇಳ್ದರು ೩೯

ವೃಕ್ಷದಲಿ ಸನ್ನಿಹಿತ ನರಹರಿಯಕ್ಷನೆದುರಿಗೆ ನಮ್ಮಯ
ಶಿಷ್ಯರೋದುವ ಗ್ರಂಥದರ್ಥ ಪರೀಕ್ಷೆ ಮಾಡಿರಿ ಎಂದರು ೪೦

ಮೌನಿರಘುನಾಥಖ್ಯರವರನು ಏನು ಓದುತಿರೆನ್ನಲು
ಆನುಪೂರ್ವಿ ಸುಧಾಖ್ಯ ಗ್ರಂಥಾರ್ಥಾನುವಾದವ ಮಾಡಲು ೪೧

ಮೇದಿನಿಯಲಿ ವಾದಿಜಯ ಸಂಪಾದಿಸಿರಿ ನೀವೆಂದರೂ
ಸಾದರದಿ ನಿಮಗೆಲ್ಲ ಜನ ಶ್ರೀಪಾದರಾಜರು ಎನ್ನಲಿ ೪೨

ಹಿಂದೆ ಭೂಸೂರನೋರ್ವ ಸತಿಸಹ ಬಂದು
ಸೇವೆಯ ಮಾಡಲು
ಒಂದು ವತ್ಸರದೊಳಗೆ ಸತ್ಯಾನಂದ ಯತಿಗಳ ಜನನವು ೪೩

ಸತ್ಯಧರ್ಮರು ಬಂದರೀ ಸುಕ್ಷೇತ್ರದರ್ಶನ ಮಾಡಲು
ಮುತ್ತಿನ್ಹಾರವ ಪದಕ ಸಹಿತಾಗಿತ್ತರೀ ನರಸಿಂಹಗೆ ೪೪

ಇದ್ದರಿಲ್ಲಿ ಜ್ಞಾನವೃದ್ಧ ಜನಾರ್ದನಾಭಿದ ಒಡೆಯರು
ಶುದ್ಧ ಮನದಲಿ ನರಹರಿಯ ಪದಪದ್ಮ ಸೇವೆಯ ಮಾಡುತ ೪೫

ಬಿಡದೆ ತಪವಾಚರಿಸಿ ಕಾರ್ಪರದೊಡೆಯನನುಪಮ ಕರುಣವ
ಪಡೆದರಿವರನು ಸ್ಮರಿಸಿದವರಿಗೆ ಕೊಡುವ ಶ್ರೀಹರಿ ಸುಖವನು ೪೬

ನಿತ್ಯದಲಿ ಪರಿಶುದ್ಧ ಮಧುಕರ ವೃತ್ತಿಯಿಂ ತಂದನ್ನವ
ಎತ್ತಿ ವೃಕ್ಷಕೆ ಕಟ್ಟುವರು ಇದು ಬುತ್ತಿ ನಾಳೆಗೆ ಎನ್ನುತ ೪೭

ನಿನ್ನೆ ವೃಕ್ಷದಿ ತಂದು ಕಟ್ಟಿದ ಅನ್ನದಿಯೊಳಗದ್ಭುತ
ಪನ್ನಗಾರಿ ಧ್ವಜನಿಗರ್ಪಿಸಿ ಉಣ್ಣುತಿಹರಾನಂದದಿ ೪೮

ಮಂದಮತಿ ಭೂದೇವನೊಬ್ಬನು ನಿಂದೆ ಮಾಡಿದನಿವರನು
ತಂದು ಕಟ್ಟಿದ ಅನ್ನ ತಂಗಳೆಂದು ತಿಳಿಯದೆ ಉಂಬರು ೪೯

ನಿಂದೆ ಮಾಡಿದ ವಿಪ್ರನನು ಕರೆಸೆಂದರರ್ಚನ ಸಮಯದಿ
ತಂದು ವೃಕ್ಷದಿ ಕಟ್ಟಿದನ್ನವ ತಂದು ಕೆಳಗಿಡಿರೆಂದರು ೫೦

ಒಡೆಯರಾಜ್ಞೆಯ ಮಿರದಲೆ ತಂದಿಡಲು
ಪೋಗಲು ವಿಪ್ರನು
ಸುಡುವು ದನ್ನವು ಎಂದೆನುತ ತಂದಿಡಲು
ಕೆಳಗಿಂತೆಂದರು ೫೧

ನಿನ್ನೆ ತಂದಿತ್ತನ್ನ ತಂಗಳ ತಿನ್ನುವರು ನಾವೆಂದರೂ
ಖಿನ್ನನಾದನು ಭೂಸುರನು ಕ್ಷಮೆಯನ್ನು ಬೇಡಿದನವರಿಗೆ ೫೨

ತೋರಿದರು ವೃಂದಾವನದಿ ಮಯೂರ ರೂಪವನೊಂದಿನ
ಸಾರಿದವರಘ ದೂರಮಾಡುವ ಚಾರು ಚರಣವ ನಂಬಿರೈ ೫೩

ಇರಲು ವಿಕೃತಿಸುವತ್ಸರದಿ ಬಂದಿರುವ ಪುಷ್ಯದ್ವಾದಶಿ
ವರ ಶರೀರವ ತೋರಿದರು ಮಂದಿರವ
ಕಟ್ಟುವ ಸಮಯದಿ ೫೪

ಶ್ರೀನಿಕೇತನನಂಘ್ರಿಯುಗಲ ಧ್ಯಾನದಲಿ ಕುಳಿತಿರುವರ
ಸಾನುರಾಗದಿ ಸ್ಮರಿಪರಿಗೆ ಸುಜ್ಞಾನ ಲಾಭವು ಸತ್ವರ ೫೫

ಈ ಮಹಾ ಸನ್ನಿಧಿಯಲ್ಲಿ ವಿಭುರಾಮ ಪುರದ ಕೃಷ್ಣಾರ್ಯರು
ಪ್ರೇಮದಿಂದಲಿ ಭಜಕರಿಗೆ ಸತ್ಕಾಮಿ ತಾರ್ಥವನಿತ್ತರು ೫೬

ನಂದಿಪತಿ ಗುಡಿಯೊಳಗೆ ಕುಳಿತಿರಲೊಂದು
ದಿನ ಕೃಷ್ಣಾರ್ಯರು
ಬಂದು ಬಹುಜನ ನೋಡುತಿರೆ ಫಣೀಂದ್ರ
ರೂಪವ ತೋರ್ದರು ೫೭

ಕಂದರಿಲ್ಲದೆ ಸೇವಿಸುವ ನರಸಾಂಬೆ
ಇವರನು ಪ್ರಾರ್ಥಿಸೆ
ನಂದದಲಿ ಫಲಕೊಡಲು ನಮ್ಮಯ ತಂದೆ
ಭೀಮಾಚಾರ್ಯರು ೫೮

ಪೊಡವಿಯೊಳು ಜನಿಸಿದರು ಕಾರ್ಪರದೊಡೆ-
ಯನರ್ಚಿಸಿ ಬಹುದಿನ
ಪಡೆದು ಕೀರ್ತಿಯ ಲೋಕದಲಿ ಹರಿಯಡಿಯ
ಧ್ಯಾನದೊಳಿರುವರು ೫೯

ಗುರುವು ಕನ್ಯಾರಾಶಿಯಲಿ ಬಂದಿರಲು ಸುರಪುರದಿಂದಲಿ
ಗುರುವರ ಶ್ರೀ ವಿಠ್ಠಲಾರ್ಯರು ವರ್ಷಪರ್ಯಂತರದಲಿ ೬೦

ಮಾಸ ಸಂಖ್ಯದಿ ಶಿಷ್ಯರಿಂದಲಿ ವಾಸ ಮಾಡುತಲುನುದಿನ
ಶ್ರೀಸುಧಾದಿ ಪ್ರವಚನದಿ ನರಕೇಸರಿಯನೊಲಿಸಿದ್ದರು ೬೧

ಸ್ಥಾನ ಮಹಿಮೆ ಇದೆಲ್ಲ ಸ್ಕಂದಪುರಾಣ
ಸಿದ್ಧವು ನಿಶ್ಚಯ
ಶ್ರೀನಿವಾಸನೆ ವಂದಿಸಿದ ನೀ
ಕಾನನದ ನರಸಿಂಹನ ೬೨

ಜಯತು ಕಾರ್ಪರ ನಿಲಯ ಸುರವರ
ಜಯತು ಲಕ್ಷ್ಮೀಮನೋಹರ
ಜಯತು ಅಶ್ವತ್ಥಾಖ್ಯ ತರುವರ ಪೊರೆವುದೆನ್ನ ಕೃಪಾಕರ ೬೩

ಧರಣಿಯಲಿ ಸುಕ್ಷೇತ್ರ ಕಾರ್ಪರ ಚರಿತೆಯನ್ನು ನಿರಂತರ
ತರಣಿ ಉದಯದಿ ಸ್ಮರಿಸುವವರನು
ಕರುಣಿಸುವ ಸಿರಿನರಹರಿ ೬೪

ಧಾರುಣೀಯಲಿ ಮೆರೆವ ಕೃಷ್ಣಾತೀರ ಕಾರ್ಪರ ನಿಲಯನ
ಸಾರಿಭಜಿಸುವ ಭಕ್ತ ಜನ ಮಂದಾರ ಸಿರಿನರಸಿಂಹನ ೬೫

## ೮೬

ಕ್ಷೋಣಿಯೊಳು ಸರ್ವಪುರಾಣಜ್ಞಸೂತರು
ಶೌನಕಾದಿ ಮುನಿಗಳಿಗೆ
ಶ್ರೀನಿವಾಸನ ಪದ ಧ್ಯಾನಿಸಿ ಸತ್ಕಥೆ
ಸಾನುರಾಗದಲಿ ಪೇಳಿದರು ೧

ಕಾಳಿರಮಣ ಚಂದ್ರ ಮೌಳಿಗೆ ಮನೆಯೆಂದು
ಕೈಲಾಸಶಿಖರ ಮೆರೆವುದು
ಪೇಳಲಳವೆ ಇಂದ್ರನೀಲ ಮಾಣಿಕ್ಯಾದಿ
ಮೇಲಾದ ರತ್ನಕಾಂತಿಗಳಿಂ ೨

ಚೂತ ಚಂಪಕ ಪಾರಿಜಾತ ಬಕುಲ
ಜಂಬುಕೇತಕಿ ಪನಸ ಪುನ್ನಾಗ
ಖ್ಯಾತವಾದ ತರುವ್ರಾತಗಳಿಂದ
ಸರ್ವಾತಿಶಯದಲಿ ತೋರುವದು ೩

ಸಿದ್ಧ ಚಾರಣ ತಪೋವೃದ್ಧರಿದೇ ಸ್ಥಳ
ಸಿದ್ಧಿದಾಯಕ ವೆಂದಿಲ್ಲಿ
ಹೃದ್ಗುಹದಲ್ಲಿ ಗೋವರ್ಧನ ಧರನಂಘ್ರಿ
ಪದಧ್ಯಾನದಿ ಕುಳಿತಿಹರು ೪

ಪವನಸಂಯುತಮಾಗಿ ದಿವಿಜ ಶೇವಿತ ಮಾಗಿ
ಅವನಿಧರಾಗ್ರಣಿಯಾಗಿ
ಭುವನೋದರತ್ವದಿ ಭುವನಜನಾಭ ಶ್ರೀಧವನಂತೆ
ಗಿರಿಯು ಮೆರೆಯುವುದು ೫

ಭಾಸುರ ರತ್ನಸಿಂಹಾಸನದಲಿ ಪರಮೇಶ್ವರ
ಪಾರ್ವತಿಯೊಡನೆ
ತೋಷದಿ ಕುಳಿತಿರಲಾ ಸಮಯದಿ ಸತಿ ಈಶಗೆ
ನಮಿಸಿ ನುಡಿದಳು ೬

ಲೋಕಕ್ಕೆ ಹಿತವಾಗಬೇಕೆಂದು ಸತಿಯು ಪಿನಾಕಿಗೆ
ನುಡಿಯ ಲಾಕ್ಷಣದಿ
ಏಕಮನದಿ ಸರ್ವಲೋಕಮಾತೆಯವ್ರತ
ನಾಕರುಣಿಸುವೆ ಕೇಳೆಂದ ೭

ಧರೆಯೊಳು ಕಾಮಿತ ವರಗಳ ನೀಡುವ
ವರಮಹಾಲಕ್ಷ್ಮಿಯ ವ್ರತವು
ಪರಮ ಭಕುತಿಯಿಂದಾಚರಿಸಿದ ಕ್ಷಣದೊಳು
ದೊರೆವುದು ಸಕಲಸೌಭಾಗ್ಯ ೮

ಮಾಸ ಶ್ರಾವಣ ಶುಕ್ರ ವಾಸರಯುತ
ಪೂರ್ಣ ಮಾಸಿಯ ದಿನದಿ ಪೂಜಿಪದು
ಭೂಸುರವರ್ಯ ಸುವಾಸಿನಿಯರನು
ವಿಶ್ವಾಸದಿಂದಾರಾಧಿಸುತಲಿ ೯

ಸಣ್ಣಶ್ಯಾವಿಗೆ ಪರಮಾನ್ನ ಭಕ್ಷಾದಿ
ಪಕ್ವಾನ್ನ ಲೇಹ್ಯಾದಿ ನೈವೇದ್ಯ
ಚಿನ್ನದ್ಹರಿವಾಣದಿ ಚನ್ನಾಗಿ ಬಡಿಸಿ
ತತ್ತನ್ನಿಯಾಮಕರ ಚಿಂತಿಪುದು ೧೦

ಧೂಪ ದೀಪಾದಿ ಸರ್ವೋಪಚಾರದಲಿ
ಕೃಪಾಪಯೋನಿಧೆಯ ಪೂಜಿಪುದು
ಕೋಪಧೂಪವು ಜ್ಞಾನದೀಪಗಳಿಂದ
ಬಿಂಬಾಪರೋಕ್ಷಿಗಳು ಪೂಜಿಪರು ೧೧

ಭೂಮಿ ಯೊಳೀವ್ರತ ನೇಮದಿಂದಲಿ ಮಾಡಿ
ಕಾಮಿತ ಪಡೆದವರ್‍ಯಾರು
ಸೋಮ ಶೇಖರನೆ ಪೇಳೀ ಮಹಾವ್ರತದ
ಮಹಾಮಹಿಮೆಯನು ಚನ್ನಾಗಿ ೧೨

ಧರೆಯೊಳು ಕುಂಡಿನ ಪುರದೊಳಗೊಬ್ಬ ಭೂಸುರನ
ಮಡದಿ ತಾನಿರಲು
ಸರಸಿಜಾಂಬಕಿಯ ಪೆಸರು ಚಾರುಮತಿಯೆಂದು
ಕರೆಯುವರೆಲ್ಲಾರು ಪುರದಿ ೧೩

ಅನುದಿನದಲಿ ಗುರುಜನರ ಶೇವಿಸುವದೆ
ವನಜನಾಭನ ಶೇವೆಯೆಂದು
ಇನಿಯನ ನುಡಿಗಳಿಗನುಸರಿಸುತ ಭಹು ವಿನಯಾದಿ
ಗುಣದಿ ಭೂಷಿತಳು ೧೪

ನಂದದಿ ಮಲಗಿರಲೊಂದಿನ ಸ್ವಪ್ನದಿ
ಬಂದಳು ವರಮಹಾಲಕ್ಷ್ಮಿ
ಸುಂದರಿ ವರವ ಬೇಡೆಂದು ನುಡಿಯೆ ಪದಕೊಂದಿಸಿ
ಪರಮ ಸಂಭ್ರಮದಿ ೧೫

ಸಿರಿದೇವಿ ನಿನ್ನಯ ಕರುಣದಿ ಬ್ರಹ್ಮನು
ನಿರ್ಮಿಸುವನು ಜಗವೆಲ್ಲ
ಪರಮಧನ್ಯಳಾದೆ ದರುಶನದಿಂದಘತರಿದು
ನೀ ಕರುಣಿಸು ಮಾತೆ ೧೬

ಬರಲು ಶ್ರಾವಣ ಶುಕ್ರವಾರ ಪೂರ್ಣಮಿ
ಹರುಷದಿಂದೆನ್ನಯ ವೃತವ
ಚರಿಸಿದಾಕ್ಷಣದೊಳು ಗರಿವೆ ಸಂಪದವೆಂದು
ವರಗಳನಿತ್ತಳು ದಯದಿ ೧೭

ಇಂತಾದ ಸ್ವಪ್ನ ವೃತ್ತಾಂತ ಸ್ವಜನಕತಿ
ಸಂತೋಷದಲಿ ಪೇಳಲವರು
ಇಂತು ನುಡಿದರು ನಿಶಾಂತದಿ ಸ್ವಪ್ನವು
ಚಿಂತಿತ ಫಲವೀವುದೆಂದು ೧೮

ರಂಗವಲ್ಲ್ಯಾದಿ ಚಿತ್ರಗಳಿಂದಲಿ ಮನಿ
ಸಿಂಗರಿಸಿದಳಾದಿನದಿ
ಅಂಗನೆ ಮಿಂದುಟ್ಟು ಶೃಂಗಾರದಿಂದ
ವಿಪ್ರಾಂಗನೆಯರನು ಕರೆದಳು ೧೯

ಕರೆಯ ಲಾಕ್ಷಣದಲ್ಲಿ ಪುರದ ನಾರಿಯರೆಲ್ಲ
ಶಿರಿದೇವಿ ಪೂಜಾಸಾಧನವ
ಧರಿಸುತ ಕರದೊಳು ಹರುಷದಿಂದಲಿ ಬಂದು
ನೆರೆದರಾ ದ್ವಿಜನಮಂದಿರದಿ ೨೦

ಅಂಬುಜಮುಖಿಯರು ಸಂಭ್ರಮದಲಿ ಪೂರ್ಣ
ಕುಂಭಗಳಿಟ್ಟರ್ಘ್ಯಾದಿಗಳಿಂ
ಅಂಬುಧಿಸುತೆಯ ಪಾದಾಂಬುಜ ಪೂಜಿಸೆ ಕುಂಬಿಣಿ
ಸುರರ ಸಮ್ಮುಖದಿ ೨೧

ಇಂದು ವದನೆಯರಾನಂದದಿ ಪಾಡುತ
ಇಂದಿರ ದೇವಿಗಾರುತಿಯ
ತಂದು ಬೆಳಗಿದರು ಛಂದದಿಂದಲಿ ದೋರು
ಬಂಧನವನೆ ಮಾಡುತಿಹರು ೨೨

ರಾಜಮುಖಿಯು ಸರ್ವರಾಜೋಪಚಾರದಿ
ಪೂಜಿಸುತಿರಲಾಗೃಹವು
ರಾಜಿಸುತಿರೆ ಸುರರಾಜ ಭವನದಂತೆ
ಸೋಜಿಗವಾಯ್ತು ನೋಳ್ಪರಿಗೆ ೨೩

ಸ್ವರ್ಣಮಯಾಂಬರ ಚರಣದಿ ನೂಪುರ
ಕೊರಳೊಳುನವರತ್ನಹಾರ
ಪರಿಶೋಭಿಸಲು ಕಂಡು ಬೆರಗಾದಳಂಗನೆ
ಸಿರಿದೇವಿ ಕರುಣವಿದೆಂದು ೨೪

ಮುತ್ತೈದೆಯರು ಭೂಸುರೋತ್ತಮರಿಗೆಲ್ಲ
ಇತ್ತರು ಬಾಗಿಣಗಳನು
ಭಕ್ತಿಯಿಂದೆಲ್ಲರು ಚಿತ್ತದಿ ಹರುಷ ಬಡುತ್ತ
ಪೋದರು ತಮ್ಮ ಮನೆಗೆ ೨೫

ಧನ್ಯಳು ಸುಗುಣ ಸಂಪನ್ನೆ ಚಾರುಮತಿ
ಪುಣ್ಯದಿಂದೆಲ್ಲರು ನಾವೆಂ
ದನ್ಯೋನ್ಯ ನುಡಿಯುತ ಬಣ್ಣಿಸಿದರು
ಧನಧಾನ್ಯ ಸಂಪದಾಗಮನ ೨೬

ಈ ಲಕುಮಿಯ ಕಥೆ ಹೇಳಿಕೇಳಿದರ
ಪಾಲಿಸುವಳು ಸಿರಿಯೆಂದು
ಶೈಲಕುಮಾರಿಗೆ ಕೈಲಾಸ ಶಿಖರದಿ ಪೇಳಿದ
ಶಿವನು ಹೀಗೆಂದು ॥೨೭॥

ತೋಯಜಾಕ್ಷಿಯೆ ಕೇಳು ಗಾಯನಮಾಡಲು
ಕಾಯಜ ಜನನಿಯ
ಆಯುರಾರೋಗ್ಯ ಐಶ್ವರ್ಯಾದಿಗಳ ಕೊಟ್ಟು
ಕಾಯುವದೆಂದು ನೀ ತಿಳಿಯೆ ೨೮

ಕಲಿಕೃತ ದೋಷವ ಕಳೆದು ಕೊಡುವ
ನಿರ್ಮಲ ಭಕ್ತಿಜ್ಞಾನ
ವೈರಾಗ್ಯ ಇಳೆಯೊಳು ಕಾರ್ಪರ ನಿಲಯ ಶ್ರೀನರಹರಿ
ಒಲಿವನು ನಿರುತ ಪಠಿಸಲು ೩೦

## ಸಂಪ್ರದಾಯದ ಹಾಡುಗಳು

### ೮೭

ಏಳು ಶ್ರೀನರಹರಿಯೇ ಏಳು ತ್ರಿದಶರ ಧೊರಿಯೇ
ಏಳು ಕರಿವರ ಕರೆಯೆ ಪಾಲಿಸಿದ ಹರಿಯೇ ಪ

ಏಳು ಭಕುತರು ನಿನ್ನ ಧೂಳಿದರುಶನಕಾಗಿ
ಆಲಯದಿ ಕಾದಿಹರು ಪಾಲಿಸಲು ಬೇಕೋ ಅ.ಪ

ಪಾಲವಾರಿಧಿಶಯನ ಪೇಳಲೆನ್ನೊಶವೆ ತವ
ಕಾಳೀಯ ಮಥನಾದಿ ಲೀಲೆಗಳ ಮಾಡುತಲಿ
ಲೋಲನೇತ್ರೆಯರು ನಿಮ್ಮಾಲಯಾಂಗಣ ಮೆಲ್ಲ
ಧೂಳಿಮಾರ್ಜನಗೈದು ಮೇಲಲಂಕರಿಸುವರೋ ೧

ದೇಶ ದೇಶಗಳಿಂದ ಭೂಸುರ ಶ್ರೇಷ್ಠ ವಿ-
ದ್ವಾಂಸರಿಲ್ಲಿಗೆ ಬಂದು ವ್ಯಾಸಮುನಿ ಆಜ್ಞೆಯಲಿ
ತೋಷಮುನಿಕೃತ ಸೂತ್ರ ಭಾಷ್ಯ ಸಹತತ್ವ ಪ್ರ-
ಕಾಶ ಪ್ರವಚನದ ಫಲ ಶ್ರೀಶನಿಗರ್ಪಿಸಲು
ಕಾದಿಹರು ಸ್ವಾಮಿ ೨

ತಂತ್ರಸಾರೋಕ್ತ ಮಹಾಮಂತ್ರಗಳ ಜಪಿಸುತ ನಿ
ರಂತರದಿ ಬುಧರು ಬಲುಶಾಂತಮನದಲಿ ರಮಾ
ಕಾಂತ ನಿಮ್ಮಯ ಮೂರ್ತಿ ಚಿಂತನೆಯ ಮಾಡುತಲಿ
ನಿಂತಿಹರೊ ಸ್ವಾಮಿ ೩

ಅಂಬುಜಾಸನ ಪಿತನೆ ಶಂಭ್ವಾದಿ ನಿರ್ಜರ ಕ
ದಂಬ ಶೇವಿತ ತ್ವತ್ಪಾದಾಂಬುಜವೆ ಗತಿಯೆಂದು
ನಂಬಿರುವ ದಾಸಜನ ಕಾಂಬೆವೆನುತಲಿ ಪಿಡಿದು
ತಂಬೂರಿ ತಾಳಗಳ ಸಂಭ್ರಮದಿ ಪಾಡುವರೊ ಹರಿಯೆ ೪

ರತಿಯ ಪಿತ ನಿನ್ನನುತಿಸಿ ಬೇಡುವೆನು ದು–
ರ್ಮತ ಮೇಘತತಿಗೆ ಮಾರುತನೆನಿಪ ಮಧ್ವಮುನಿ
ಕೃತ ಸರ್ವಗ್ರಂಥಗಳ ಸತತ ಪ್ರವಚನ ಮಾಳ್ಪ
ಕ್ಷಿತಿ ಸುರರ ಸಂಘವನು ಹಿತದಿ ಪಾಲಿಸಲು ಹರಿಯೆ ೫

ಕಂದ ಪ್ರಹ್ಲಾದನ್ನ ತಂದೆ ಬಾಧಿಸುತಿರಲು
ಬಂದು ಸ್ತಂಭದಲಿ ತ್ವರದಿಂದ ರಕ್ಷಿಸಿದ ನಿನ್ನ
ಪೊಂದಿ ಸೇವಿಪರ ಭವ ಬಂಧನವ ಬಿಡಿಸಿ ಆ
ನಂದ ಗರಿಯಲಿ ಬೇಕೊ ನಂದಕುವರ ೬

ವರಕೃಷ್ಣತೀರ ಕಾರ್ಪರ ನಿಲಯನೆನಸಿ ಬಹು
ಶರಣು ಜನರನು ಪೊರೆವ ಸಿರಿನಾರಸಿಂಹ
ಅರುಣೋದಯದಲೆದ್ದು ಧರಣಿಸುರ
ತರುಣಿಯರು ಸ್ಮರಣೆ ಮಾಡುತಲಿಹರು
ಕರುಣಿಸಬೇಕೊ ೭

## ೮೮

ಜಯ ಮಂಗಳೆಂದು ಪಾಡಿರೆ ಶ್ರೀರಂಗನಾಥಗೆ
ಲಕ್ಷ್ಮೀರಂಗನಾಥಗೆ ಮಂಗಳಪುರಿ ಜಾಲ
ಹಳ್ಳಿರಂಗ ನಿಲಯಗೆ ಬ್ಯಾಗೆ ಪ

ಅಂಗನೆಯರು ಶೃಂಗಾರದಿ ಸಂಗೀತಪ್ರಿಯಗೆ
ಮಂಗಳಾಂಗ ದೇವಗೆ ಮಾತಂಗವರದಗೆ ಬ್ಯಾಗೆ ೧

ಇಂದಿರವರ ಮಂದರೋದ್ಧರ ನಂದಕುವರಗೆ
ಹಿಂದಕೆ ಮುದಗಲ್ಲು ಪುರದಿ ಬಂದು ನಿಂದಗೆ ಬ್ಯಾಗೆ ೨

ದಾರಿಯೊಳು ಉಪ್ಪಾರಜನರ ಸೇರಿಬಂದವಗೆ
ಸಾರಿದವರ ಪೊರೆವ 'ಕಾರ್ಪರ ನಾರಶಿಂಹಗೆ' ಬ್ಯಾಗೆ ೩

## ೮೯

ಮಂಗಳ ಜಯ ಮಂಗಳ
ಮಂಗಳ ಶ್ರೀ ನರಸಿಂಗ ಮೂರುತಿಗೆ		ಪ

ಅಂಗುಟಾಗ್ರದಿ ಗಂಗೆಯ ಪಡೆದ
ಮಂಗಳ ಗಾತ್ರ ಶ್ರೀ ರಂಗನಿಗೆ
ಅಂಗಜರಿಪು ಧನು ಭಂಗವ ಮಾಡಿ ಸೀ-
ತಾಂಗನೆಯಳ ಕರಪಿಡಿದವಗೆ		೧

ವರಮತ್ಸ್ಯಗೆ ಗಿರಿಧರ ಕ್ರೋಢಗೆ
ತರುಳನ ರಕ್ಷಿಸಿ ಧರೆಯ ಬೇಡಿದಗೆ
ಪರಶು ಧರಿಸಿದ ರಾಮಕೃಷ್ಣಗೆ
ಧರಿಸದೆ ವಸನವ ತುರಗನೇರಿದಗೆ		೨

ಕರಿವರ ಕರೆಯಲು ಭರದಿ ಬಂದವಗೆ
ಸ್ಮರಿಪರ ಭಯ ಪರಿಹರಿಸುವ ದೇವಗೆ
ಶರಣು ಜನಕೆ ಸುರತರುವೆಂದೆನಿಸಿದ
ಸಿರಿ ಕಾರ್ಪರ ನರಹರಿ ರೂಪಗೆ		೩

## ೯೦

ಮಂಗಳಂ ನರಶಿಂಗ ಮೂರುತಿಗೆ ಲಕ್ಷ್ಮೀಸಮೇತಗೆ
ತುಂಗ ಮಹಿಮ ವಿಹಂಗ ವಾಹನಗೆ
ಅಂಗಜನಪಿತಗೆ ಅಂಗುಟದಿ ಗಂಗೆಯನು ಪಡೆದವಗೆ ಮಾ
ತಂಗವರದಗೆ		ಪ

ವಾರಿಜಾಸನ ಮುಖ್ಯಸುರನುತಗೆ ಉ-
ದಾರ ಚರಿತಗೆ ಸೇರಿದವರಘದೂರ ಮಾಡುವಗೆ
ಕಾರ್ಪರ ಋಷಿಗೆ ಘೋರ ತಪಸಿಗೆ ಒಲಿದು ಬಂದವಗೆ
ಅಶ್ವತ್ಥ ರೂಪಗೆ		೧

ಕುಕ್ಷಿಯೊಳು ಜಗವಿಟ್ಟು ರಕ್ಷಿಪಗೆ ಕರುಣಾಕ-
ಟಾಕ್ಷಗೆ ವಕ್ಷದೊಳು ಶ್ರೀ ವತ್ಸಲಾಂಛನಗೆ ದ್ರೌಪದಿ ದೇವಿಗೆ
ಅಕ್ಷಯಾಂಬರವಿತ್ತು ಸಲಹಿದಗೆ ಲಕ್ಷ್ಮೀನೃಸಿಂಹಗೆ ೨

ಕೃಷ್ಣವೇಣಿ ತಟವಿರಾಜಿತಗೆ ಸೃಷ್ಟ್ಯಾದಿ ಕರ್ತಗೆ
ಶ್ರೇಷ್ಠತರು ಪಿಪ್ಪಲದಿ ಪ್ರಕಟಿತಗೆ ದುಷ್ಟನಿಗ್ರಹಗೆ
ದೃಷ್ಟ ಬಾಹುಗಳಿಂದ ಭಜಕರಿಗೆ ಇಷ್ಟಾರ್ಥಗರಿವಗೆ ೩

ಹಿಂದೆ ಗೋರ್ರೂಪದಲಿ ಬಂದವಗೆ ಬಹುಸುಂದರಾಂಗಗೆ
ವಂದಿಸುವೆ ಶೀ ವೇಂಕಟೇಶನಿಗೆ ಮಂದರೋದ್ಧರಗೆ
ವಂದಿಪರ ಭವ ಬಂಧ ಬಿಡಿಸುವಗೆ ಆನಂದವೀವಗೆ ೪

ತರುಳ ಪ್ರಹ್ಲಾದನ್ನ ಕಾಯ್ದವಗೆ ಸುರಸಾರ್ವಭೌಮಗೆ
ಶರಣು ಜನ ಮಂದಾರನೆನಿಸುವಗೆ ಭೂಸುರರ ಪೊರಿವಗೆ
ಧರಣಿಯೊಳು ಕಾರ್ಪರ ಸುಮಂದಿರಗೆ ಶಿರಿನಾರಶಿಂಹಗೆ ೫

## ೬೧

ಮಂಗಳ ವೇಣು ಗೋಪಾಲಾ ಸಿರಿಲೋಲ
ಗಜಪಾಲಾ ಗಜಪಾಲಾ ಶುಭಲೀಲಾ ಪ

ಅಂಗುಟಾಗ್ರದಿಂ ಗಂಗೆಯ ಪಡೆದಿಹ
ಮಂಗಳ ಚರಿತ ಶುಭಾಂಗ ಶ್ರೀ
ರಂಗ ದಯಪಾಂಗ ದಯಪಾಂಗ ನೀಲಾಂಗ ೧

ನಂದಕುಮಾರ ನವನೀತ ಚೋರ
ವೃಂದಾವನ ಸುವಿಹಾರ
ಭವದೂರ ಸುಕುಮಾರಸುಕುಮಾರ ಶರೀರ ೨

ಧರೆಯೊಳು ಮೆರೆಯುವ ಸಿರಿಕಾರ್ಪರ
ನರಹರಿ ರೂಪನೆ ಪೊರೆಯೆನ್ನ ಅಘ
ಹರಣ ತವಚರಣ ತವಚರಣಕೆರಗುವನ ೩

## ೯೨

ಆರುತಿ ಮಾಡುವೆನಾ ಕೃಷ್ಣಮೂರುತಿಗೆ ಪ

ಆರುತಿ ಮಾಡುವೆ ನಾರಿ ದ್ರೌಪದಿಗೆ
ಸೀರಿಗಳುಡಿಸಿದ ಮಾರಪಿತಗೆ ಸಖಿ ಅ.ಪ

ಅಂಗುಟಾಗ್ರದಿಂದ ಗಂಗೆಯ ಪಡೆದಂಥ
ಮಂಗಳಪ್ರದ ಶಿರಿರಂಗನ ಚರಣಕೆ ೧

ವಂದಿಸುವರ ಭವ ಬಂಧವ ಬಿಡಿಸುವ
ನಂದಗೋಪನ ಮುದ್ದು ಕಂದ ಶ್ರೀಕೃಷ್ಣಗೆ ೨

ಆರಾದಿಸುವ ರಘ ದೂರಮಾಡುವ ಶುಭ
ಕಾರಿ ಕೊಪ್ಪರ ಸಿರಿನಾರಶಿಂಹಗೆ ಬೇಗ ೩

## ೯೩

ಆರುತೀಯ ತಾರೆ ಶ್ರೀಹರಿಗೆ ಸುರಸಾರ್ವಭೌಮಗೆ ಪ

ವಾರಿಜನಾಭಗೆ ನೀರದಾಭಗೆ ಬಾರೆ
ಬೇಗನೆ ಸಾರಸಾಂಬಕಿ ಅ.ಪ

ಮಾರಜನಕಗೆ ವಾರಿಜಭವ ಕು-
ಮಾರ ಜನಕ ಮುಖಾಮರೇಡ್ಯಗೆ
ಮಾರವೈರಿ ಚಾಪ ಮುರಿದ ಸುಕು-
ಮಾರ ಶರೀರ ಸೀತಾರಾಮ ಚಂದ್ರಗೆ ೧

ಇಂದಿರವರಗೆ ಮಂದರಧರ ಪು-
ರಂದರಾನುಜ ಸಿಂಧುಶಯನಗೆ
ಮಂದಯಾನೆ ಛಂದದಿಂದ ಬಂದೀಗ
ವಂದೀಶ್ಯಾನಂದಾದಿ ಬೆಳಗಲು ೨

ವಾರಣಭಯ ನಿವಾರಣ ಜಗ–
ತ್ಕಾರಣಗೆ ಸುಖಪೂರ್ಣದೇಹಗೆ
ಸೇರಿ ತನ್ನ ಸೇವಿಪರಘ ದೂರ
ಕೊಪ್ಪರ ಶ್ರೀ ನಾರಸಿಂಹನಿಗೆ ೩

## ೯೪

ಇಂದು ಆರತಿ ತಂದು ಬೆಳಗಿರೆ ಇಂದಿರಾವರಗೆ
ಮಂದರಧರಗಿಂದು ಪ

ನಂದಸುತನಿಗೊಂದಿಸುತಲಿ ಸಿಂಧು ಶಯನಗೆ
ಕುಂದರದನೆ ಅ.ಪ

ನಂದಿ ವಾಹನ ವಂದಿತ ದಶ
ಕಂಧರಾಂತಗೆ ಕುಂದರದನೆ
ವಂದಿಸುವರ ಬಂಧ ಬಿಡಿಶ್ಯಾ
ನಂದಗರಿವಗೆ ಮಂದಗಮನೆ ೧

ಅಂಗನೆಯರು ಶೃಂಗಾರದಲಿ
ಸಂಗೀತ ಪ್ರಿಯಗೆ ಭೃಂಗಾಲಕಿ
ಗಂಗಾಪಿತ ಮಂಗಳಾಂಗ ವಿ–
ಹಂಗ ವಾಹನಗೇ ತಿಂಗಳಮುಖಿ ೨

ನಾರಿಯಳ ನುದ್ಧಾರ ಮಾಡಿದ
ಚಾರು ಚರಣಗೆ ನಾರಿ ಮಣಿಯೆ
ಸೇರಿದವರ ಪೊರೆವ ಕಾರ್ಪರ
ನಾರಶಿಂಹಗೆ ಭೂರಿಮಹಿಮಗಿಂದು ೩

## ೯೫

ಕುಂದಣದಾರುತಿ ತಂದು ಬೆಳಗಿರೆ ಪ

ಇಂದಿರವರಗೆ ಮಂದರ ಧರಗೆ
ವಂದಿಸುವರ ಭವಬಂಧ ಬಿಡಿಸುವಗೆ ೧

ವಿಜಯಸಾರಥಿಗೆ ದ್ವಿಜವರ ಗಮನಗೆ
ಗಜ ವರದಗೆ ಪಂಕಜ ಭವಪಿತಗೆ ೨

ಸುರಪರಿ ಪಾಲಗೆ ಶರಧಿಜ ಲೋಲಗೆ
ಶರಣರ ಪೊರಿವ ಕಾರ್ಪರ ನರಸಿಂಹಗೆ ೩

## ೯೬

ಬೆಳಗಿರೆ ಆರುತಿ ಲಲನೆಯರೆಲ್ಲರು
ಬಲಿ ನೃಪತಿಯ ಬಾಗಿಲ ಕಾಯ್ದವಗೇ ಪ

ಶಿಲೆಯನು ಪದದಲಿ ಲಲನೆಯ ಮಾಡಿದ
ಇಳಿಜಾರಮಣನ ಚಲುವ ಮೂರುತಿಗೆ ೧

ಪದುಮಾವತಿಯಳ ಮದುವೆಯಾದವಗೆ
ಸುದತಿಯೆಲ್ಲರು ಮುದದಲಿ ಪಾಡುತ ೨

ಕರಿವರ ಕರೆಯಲು ಭರದಿ ಬಂದೊದಗಿದ
ಸಿರಿ ಕಾರ್ಪರ ನರಹರಿ ರೂಪನಿಗೆ ೩

## ೯೭

ಹರಷದಿ ತಾ ಸಖಿ ತ್ವರದಿ ಆರುತಿಯ
ದ್ವಿರದ ವರದ ಶಿರಿನರಹರಿಗೆ ಪ

ನಿಗಮ ತಂದವಗೆ ನಗಧರ ಕ್ರೋಢಗೆ
ಮಗುವಿನ ಸಲಹಿ ಜಗವ್ಯಾಪಿಸಿದಗೆ
ಭೃಗುಜಾ, ರಘುಜಾ ವ್ರಜಜಾರ್ತಿ
ಹರಣ ವಿಗತವಸನ ತುರುಗನೇರಿದಗೆ ೧

ಗರುಡ ಗಮನಗೆ ಶರಧಿಶಯನಗೆ
ಸುರನದಿ ಪಿತ ಭೂಸುರ ಪ್ರಿಯಗೆ
ಅರುಣಾ, ಚರಣಾ ಕರುಣಾಕರಮಂ–
ದರಧರ ಶರಣರ ಪೊರೆವ ಸಿರಿವರಗೆ ೨

ಛಳಿಮಳೆ ಸಹಿಸುತ ಛಲದಲಿಧೇನಿಪ
ಬಲುವಿಧ ಭಕ್ತಾವಳಿ ಹೃನ್ಮಧ್ಯದಿ
ಪೊಳೆವಾ, ನಲಿವಾ ಕಳೆವಾಘವ ಭೂ–
ವಲಯದಿ ಕಾರ್ಪರ ನಿಲಯ ನರಹರಿಗೆ ೩

## ೯೮

ಇಂದು ಆರುತಿ ತಂದು ಬೆಳಗಿರೆ ಸಿಂಧುರಾಜನ ಕುವರಿಗೆ
ಸಿಂಧು ರಾಜನ ಕುವರಿಗೆ ಅರವಿಂದ
ನಾಭನ ಮಡದಿಗೆ ಪ

ಅಂದು ಸುರಕೃತ ಸಿಂಧು ಮಥನದಿ ಬಂದು
ನೋಡುತ ಕೃಷ್ಣಗೆ
ವಂದಿಸುತ ಪೂಮಾಲೆ ಹಾಕಿದ
ನಂದಗೋಪಕುಮಾರಗೆ ೧

ಎಲ್ಲದೇಶ ದೊಳೆಲ್ಲ ಕಾಲದೊಳೆಲ್ಲ ಸುರರೊಳು ಕೃಷ್ಣಗೆ
ಇಲ್ಲ ಸಮರೆಂತೆಂಬುದನು ಜಗಕೆಲ್ಲ ತೋರಿದ ದೇವಿಗೆ ೨

ವಾರವಾರದಿ ಚಾರುಪದಯುಗ ಸಾರಿಭಜಿಸುವ ಜನರಿಗೆ ಅ-
ಪಾರ ಸೌಖ್ಯಗಳೀವ ಕಾರ್ಪರ ನಾರಸಿಂಹನ ರಾಣಿಗೆ ೩

೯೯

ಜಯ ಜಯ ಶ್ರೀಹರಿಪ್ರಿಯೆ ಜಯಕ್ಷೀರಾಂಬುಧಿತನಯೇ
ಜಯ ಜಯ ಕೋಮಲಕಾಯೆ ಬಿಡದೆನ್ನನು ಕಾಯೆ ಪ

ಜಯ ರತ್ನಾಕರ ತನಯೆ ಕುರುಕರುಣಾಮಯಿ ಸದಯೆ
ಹರಿ ವಕ್ಷ ಸ್ಥಳ ನಿಲಯೆ ಸುರಮುಖಗೇಯೆ ೧

ಜಯ ಜಯ ಪಾವನ ಚರಿತೆ ಜಯಚತುರಾನನ ಮಾತೆ
ಜಯ ಭಕುತಾಭಯ ದಾತೆ ನಮಿಸುವೆ ಭೂಜಾತೆ ೨

ಜಯ ಜಯ ಕಾರ್ಪರ ಸದನೆ ಜಯನರಸಿಂಹನ ರಾಣಿ
ಸುರಸಂಶೇವಿತಚರಣೆ ಪಾಹಿಜಗಜ್ಜನನಿ ೩

೧೦೦

ತಾರೆ ಆರುತಿ ಸಾರಸಾಂಬಕಿ ಭಾರತೀವರಗೆ ಬೆಳಗುವೆನು ಪ

ಮಾರಮಣನಾಗಾರವೆನಿಪ್ಪೈಕೂರು
ನರಸಿಂಹಾರ್ಯ ಶೇವಿತಗೆ ಅ.ಪ

ನೂರುಯೋಜನ ವಾರಿನಿಧಿಯನು ಹಾರಿ ಜಾನಕಿಗೆ
ಚಾರು ಮುದ್ರಿಕೆಯನಿತ್ತು ಪುರದಿಭಯ ತೋರಿರಾಕ್ಷಸಗೆ
ನಾರಿಮಣಿಯ ಶುಭವಾರುತಿಯ ರಘುವೀರಗರುಹಿದ
ಮಾರುತಾತ್ಮಜಗೆ ೧

ಇಂದು ಕುಲದಲಿ ಬಂದು ಕುಂತಿಯ ಕಂದನೆಂದೆನಿಸಿ
ನಿಂದು ರಣದಿ ಖಳವೃಂದ ಸಹಿತ ಕುರುವೃಂದವನು ಮಥಿಸಿ
ನಂದಗೋಪನ ಕಂದನೊಲಿಮೆಯ
ಛಂದದಲಿ ಪಡೆದಂಥ ಭೀಮಗೆ ೨

ಭೂತಳದಿ ಸುಖತೀರ್ಥರೆನಿಸಿ ಸಚ್ಛಾಸ್ತ್ರವನು ರಚಿಸಿ
ಭೀತಿ ಪುಟ್ಟಿಸುತ ಖ್ಯಾತಮಾಯ್ಗಳ ವ್ರಾತವನು ಜಯಿಸಿ
ಪೂತ ಕಾರ್ಪರ ಕ್ಷೇತ್ರ ನರ ಮೃಗನಾಥನ ಪರಮಪ್ರೀತಿ
ಪಾತ್ರನಿಗೆ ೩

## ೧೦೧

ವೃಂದಾವನೀ ದೇವಿ ವಂದಿಸುವೆ ಶ್ರೀ ತುಳಸಿ
ಮಂದಿರಳೆ ನಿನ್ನಪದಕೆ
ವಂದಾರು ಜನತತಿಗೆ ಮಂದಾರಳೆನಿಸಿರುವಿ
ಸಂದೇಹವಿಲ್ಲವಿದಕೆ ೧

ಅಂದು ಧನ್ವಂತರಿಯು ತಂದಿರುವ ಪೀಯೂಷ
ದಿಂದ ಪೂರಿತ ಕಲಶದಿ
ಇಂದಿರಾಪತಿಯ ಆನಂದ ಬಾಷ್ಪೋದಕದ
ಬಿಂದು ಬೀಳಲು ಜನಿಸಿದಿ ೨

ಶ್ರೀ ತುಳಸಿ ನಿನ್ನನು ನಿಕೇತನದಿ ಪೂಜಿಪರ
ಪಾತಕವ ಪರಿಹರಿಸುವಿ
ಶ್ರೀ ತರುಣಿಪತಿಗೆ ಬಲುಪ್ರೀತಿ ವಿಷಯಳೆನಿನ್ನ
ನಾ ಸ್ತುತಿಸಲೆಂತು ಜನನಿ ೩

ಸರ್ವ ತೀರ್ಥಗಳೆಲ್ಲ ತರುಮೂಲದಲ್ಲಿಹವು
ಸರ್ವ ವಿಬುಧರು ಮಧ್ಯದಿ
ಸರ್ವ ವೇದಗಳೆಲ್ಲ ತರುಅಗ್ರಭಾಗದಲಿ
ಇರುತಿಹರು ಬಿಡದೆ ನಿರುತ ೪

ತುಳಸಿ ನಿಮ್ಮಯ ಲಕ್ಷದಳಗಳಿಂದಲಿ
ಲಕ್ಷ್ಮಿನಿಲಯನಂಘ್ರಿಗಳರ್ಚಿಸಿ
ಕಲುಷ ವರ್ಜಿತನಾಗಿ ಬಲುಬೇಗ ಶ್ರೀಹರಿಯ
ಒಲುಮೆ ಪಡೆವನು ಜಗದೊಳು ೫

ತುಳಸಿ ದೇವಿಯೆ ನಿನಗೆ ಜಲವೆರೆದು ಕುಂಕುಮದ
ತಿಲಕವಿಡುತಲಿ ನಿತ್ಯದಿ
ಲಲನೆಯರು ಪೂಜಿಸಲು ಒಲಿದಿತ್ತು ಸೌಭಾಗ್ಯ
ಸಲಹುವಿಯೆ ಕರುಣದಿಂದ ೬

ಮಾಧವ ಪ್ರಿಯ ತುಳಸಿ ಸಾದರದಿ ನಿನ್ನೊಳಗೆ
ಶ್ರೀದೇವಿ ನಿಂದಿರುವಳು
ಮೋದಮುನಿ ಶಾಸ್ತ್ರವನು ಬೋಧಿಸುವ ಬುಧಜನರ
ಪಾದಸೇವೆಯ ಕರುಣಿಸು ೭

ಮಿತ್ರನುದಯದಲೆದ್ದು ಚಿತ್ತನಿರ್ಮಲರಾಗಿ
ಭಕ್ತಿಯಲಿ ಶ್ರೀ ತುಳಸಿಯ
ಮೃತ್ತಿಕೆಯ ಧರಿಸಿದ ಮಹಾತ್ಮರನು ಕಂಡು ಯಮ
ಭೃತ್ಯರಂಜುವರು ಭಯದಿ ೮

ಇಂತು ಶ್ರೀತುಳಸಿ ಸೀಮಂತಿನಿಯ ಸ್ತೋತ್ರವ ನಿ–
ರಂತರದಿ ಪಠಿಸುವವರ
ಚಿಂತಿತ ಪ್ರದನಾಗಿ ನಿಂತು ಕಾರ್ಪರದಿ ಸಿರಿ
ಕಾಂತ ನರಹರಿ ಪೊರೆವನು ೯

## ೧೦೨

ಬೆಳಗಿರೆ ಆರುತಿಯ ಶ್ರೀ ತುಳಸಿಗೆ ಪ

ಬೆಳಗಿರೆ ಆರುತಿ ತುಳಸಿದೇವಿಗೆ ನಿತ್ಯ
ಲಲನೆಯರೆಲ್ಲ ಮಂಗಳವೆಂದು ಪಾಡುತ ಅ.ಪ

ಸುಧೆಯ ಕಲಶದೊಳು ಮಧುವೈರಿನಯನದ
ಮುದ ಜಲಬೀಳಲು ಉದುಭವಿಸಿದಳೆಂದು ೧

ದರುಶನ ಮಾತ್ರದಿ ದುರಿತಗಳೋಡಿಸಿ
ಸ್ಥಿರವಾದ ಸೌಭಾಗ್ಯ ಕರುಣಿಸುವಳೆಂದು ೨

ಇಳೆಯೊಳು ಕಾರ್ಪರ ನಿಲಯ ಶ್ರೀನರಹರಿ
ಒಲುಮೆಯ ಪಡೆದ ಶ್ರೀ ತುಳಸಿದೇವಿಗೆ ಬೇಗ ೩

## ೧೦೩

ಇಂದು ಆರುತಿ ತಂದು ಬೆಳಗಿರೆ ಚಂದ್ರ ಮೌಳಿಯ ರಾಣಿಗೆ
ಚಂದ್ರಮೌಳಿಯ ರಾಣಿಗೆ ಅಮರೇಂದ್ರ ವಂದ್ಯ ಭವಾನಿಗೆ ಪ

ಕುಂದ ಮಲ್ಲಿಗೆ ಜಾಜಿಕುಸುಮಗಳಿಂದ ಶೋಭಿತ ಶಬರಿಗೆ
ಇಂದು ಮುಖಿಯರು ವಂದಿಸುತ ಆನಂದದಲಿ ಗಿರಿಕುವರಿಗೆ ೧

ಸಡಗರದಿ ದ್ವಿಜ ಮಡದಿಯರು ಕರಪಿಡಿದು
ಆರತಿ ಬೆಳಗುತ
ಮೃಡನ ರಾಣಿಯೆ ಕೊಡುಯೆಮಗೆ
ಸೌಭಾಗ್ಯ ಸಂತತಿ ಸಂತತ ೨

ಈಶ ನರಸಿಯ ಪೂಜೆ ಮಾಳ್ಪ ಸುವಾಸಿನಿಯರಿಗೆ ಸಂತತ
ಶ್ರೀಶ ಕಾರ್ಪರ ನರಹರಿಯು ಪೂರೈಸಿಕೊಡುವನು ವಾಂಛಿತ ೩

## ೧೦೪

ಮಂಗಳಂ ಜಯ ಮಂಗಳಂ ಪ

ಮಂಗಳಂ ಜಯಮುನಿ ಪುಂಗವಗೆ
ಮಂಗಳ ಕರುಣಾ ಪಾಂಗನಿಗೆ ಅ.ಪ

ಎತ್ತಿನರೂಪವ ಧರಿಸಿದಗೆ ಗುರು
ಮಸ್ತಕ ಭಾರವ ಪೊತ್ತವಗೆ
ಮತ್ತೆ ಮಧ್ವಕೃತ ಗ್ರಂಥ ಭಾವವನು
ಚಿತ್ತದಿ ತಿಳಿದ ಮಹಾತ್ಮನಿಗೆ ೧

ಮಂಗಳ ವೇಢಿಯನಾಯಕಗೆ
ತುಂಗ ತುರಂಗವ ನೇರಿದಗೆ
ತಿಂಗಳ ಭಾಗದಿ ಪಶುವಿನಂತೆ ತ-
ದ್ಗಂಗೆಯ ಪಾನವ ಮಾಡಿದಗೆ ೨

ಮಧ್ವಮತಾಂಬುಧಿ ಚಂದ್ರನಿಗೆ
ವಿದ್ಯಾರಣ್ಯನ ಗೆಲಿದವಗೆ
ಗೆದ್ದು ಮಾಯಿಗಳ ಮೋದಮುನಿಯಮತ
ಸಿದ್ಧಾಂತವ ಸ್ಥಾಪಿಸಿದವಗೆ ೩

ನಾಕಾಧಿಪನೆಂದೆ ನಿಸಿದಗೆ
ಕಾಕಿನಿ ತೀರದಿ ನಿಂದವಗೆ
ಶ್ರೀಕರ ಭಾಷ್ಯಕೆ ಟೀಕೆಯ ರಚಿಸಿದ
ಲೋಕೋದ್ಧಾರಕ ಗುರುವರಗೆ ೪

ಮಳಖೇಡಾಖ್ಯ ಸುಮಂದಿರಗೆ
ಇಳೆ ಸುರಸೇವಿತ ಚರಣನಿಗೆ
ಇಳೆಯೊಳು ಕಾರ್ಪರ ನಿಲಯ ನರಹರಿಯ
ಒಲುಮೆಯ ಪಡೆದ ಯತೀಂದ್ರನಿಗೆ ೫

## ೧೦೫

ಭಕ್ತ ಪ್ರಹ್ಲಾದಗೆ ಆರುತಿ ಮಾಡುವೆನಾ ಪ

ಆರುತಿ ಮಾಡುವೆ ನಾರಿಯ ಗರ್ಭದಿ
ನಾರದ ಮುನಿಯಿಂದ ನಾರವ ಪಡೆದಗೆ ಅ.ಪ

ಶಾಲೆಯೊಳಗೆ ದೈತ್ಯ ಬಾಲಕರಿಗೆ ಸಿರಿ
ಲೋಲನೆ ಪರನೆಂದು ಪೇಳಿದ ಬಾಲಕಗೆ ೧

ನಂದತೀರ್ಥರ ಮತಸಿಂಧುವಿಗೆ ಪೂರ್ಣ
ಚಂದ್ರನೆಂದೆನಿಸಿದ ಚಂದ್ರಿಕಾರ್ಯರಿಗೆ ೨

ವಂದಾರು ಜನರಿಗೆ ಮಂದಾರನೆನಿಸಿದ
ನಂದದಾಯಕ ಸುಧೀಂದ್ರಕುಮಾರಗೆ ೩

ವೃಂದಾವನದೊಳಗೆ ನಿಂದು ಶೇವಕಜನ
ವೃಂದಾಪಾಲಕ ರಾಘವೇಂದ್ರಯತೀಂದ್ರಗೆ ೪

ಧರೆಯೊಳು ಶರಣರ ಪೊರೆವ ಕಾರ್ಪರ
ನರಹರಿ ಯ ನೊಲಿಸಿದಂಥ ಪರಿಮಳಾಚಾರ್ಯರಿಗೆ ೫

## ೧೦೬

ಮಂಗಳಂ ಜಯ ಮಂಗಳಂ ಪ

ಮಂಗಳ ಗುರು ಪ್ರಹ್ಲಾದರಿಗೆ
ಮಂಗಳ ವ್ಯಾಸ ಯತೀಂದ್ರರಿಗೆ
ಮಂಗಳ ಗುರುರಾಘವೇಂದ್ರರಿಗೆ
ಮಂಗಳಂ ಸತ್ಯ ಸಂಧರಿಗೆ ಅ.ಪ

ಶಾಲೆಯಲ್ಯಸುರ ಬಾಲರಿಗೆ
ಲೀಲೆಯಲ್ಲಿ ಆಸಕ್ತರಿಗೆ
ಮಾಲೋಲನ ಶುಭಲೀಲೆಯ ಪೇಳಿದ
ಬಾಲನಾದ ಪ್ರಹ್ಲಾದನಿಗೆ ೧

ನಂದತೀರ್ಥಮತ ಸಿಂಧುವಿಗೆ
ಚಂದ್ರ ಸದೃಶನಾಗಿರುವನಿಗೆ

ಚಂದ್ರಿಕಾದಿ ಗ್ರಂಥ ತ್ರಯರಚಿಸ್ಯಾ
ನಂದ ನೀಡಿದ ಯತೀಂದ್ರನಿಗೆ ೨

ವೃಂದಾವನ ಶುಭಮಂದಿರಗೆ
ವಂದಿಪಜನ ಮಂದಾರನಿಗೆ
ಬಂದ ಭಜಕರಘ ವೃಂದವ ಕಳೆದಾ-
ನಂದ ಕೊಡುವ ರಾಘವೇಂದ್ರನಿಗೆ ೩

ಸತ್ಯ ಧರ್ಮರತರೆನಿಪರಿಗೆ
ಸ್ತೋತ್ರ ಗ್ರಂಥಗಳ ರಚಿಸಿದಗೆ
ಸತ್ಯ ಭೋಧ ತೀರ್ಥರ ಕುಮಾರಗುರು
ಸತ್ಯ ಸಂಧ ತೀರ್ಥಾಭಿದಗೆ ೪

ರಾಮ ಪದಾಂಬುಜ ಭೃಂಗನಿಗೆ
ಕಾಮಿತ ಫಲದ ಕೃಪಾಂಗನಿಗೆ
ಶ್ರೀ ಮತ್ಕಾರ್ಪರ ಧಾಮ ನರಹರಿಯ
ಪ್ರೇಮ ಪಾತ್ರರೆಂದೆನಿಸಿದಗೆ ೫

## ೧೦೭

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಶ್ರೀ ಮದ್ರಘುಕುಲನಾಥನಿಗೆ
ಆ ಮಹ ಲಕುಮಿ ಸಮೇತನಿಗೆ
ರಾಮದೂತ ಕಪಿನಾಥನಿಗೆ
ಸೋಮ ಶೇಖರಾದ್ಯ ಮರರಿಗೆ ೧

ಶುದ್ಧ ಮೂರುತಿ ಬಾದ ರಾಯಣಗೆ
ಮಧ್ವರಾಜ ಸದ್ಗುರುವರಗೆ
ಪದ್ಮನಾಭಯತಿ ಮುಖ್ಯರಿಗೆ
ಮಧ್ವಮತಾಂಬುಧಿ ಚಂದ್ರರಿಗೆ ೨

ಹರಿನಾಮಾಮೃತ ಧರೆಯೊಳಗೆ
ಗರಿದ ಪುರಂದರ ದಾಸರಿಗೆ
ಹರಿಪರ ನೆನ್ನುತ ಸುರಮುನಿಗರುಹಿದ
ವರ ವಿಜಯಾಭಿದ ದಾಸರಿಗೆ ೩

ವಾನರ ರೂಪವ ಕಾಣುತ ಸುಖಿಸುವ
ಧೇನು ಪಾಲ ದಾಸರ್ಯಾರಿಗೆ
ಶ್ರೀನಿವಾಸನ ಕಥಾಮೃತ ರಚಿಸಿದ
ಮಾನವಿ ಮಂದಿರ ದಾಸರಿಗೆ ೪

ಸುರಪತಿಯಂದದಿ ಧರೆಯೊಳಗೆ
ಮೆರೆದ ಗುರುವಿಜಯ ರಾಯರಿಗೆ
ಶರಣರ ಪೊರಿಯುವ ಶಿರಿಕಾರ್ಪರ
ನರಹರಿಯ ನೊಲಿಸಿರುವ ದಾಸರಿಗೆ ೫

## ೧೦೮

ಬಾರೋ ಬೇಗನೆ ಶ್ರೀಧರ ಗುಣಾಕರ ಪ

ಬಾರೋ ಬೇಗನೆ ಪಾದವಾರಿಜಕೆರಗುವೆ
ಧಾರುಣಿಯನು ಪೊತ್ತ ಚಾರು ಪರಿಯಂಕಕ್ಕೆ ಅ.ಪ

ಶೌರಿ ಅಗ್ರಜನಾಗಿ ಕ್ರೂರರ ಸದೆದು ಭೂ
ಭಾರವನಿಳುಹಿದ ಶೌರ್ಯದ ಮಂಚಕೆ ೧

ರಾಮನ ಶೇವಿಸಿ ಪ್ರೇಮವನು ಪಡೆದಂಥ
ಸೌಮಿತ್ರಿಯೆಂಬ ಸುನಾಮದ ಹಾಸಿಗೆಗೆ ೨

ಸಾಸಿರವದನದಿ ಶ್ರೀಶನೆ ತವಗುಣ
ಲೇಶ ವರ್ಣಿಸುವಂಥ ಭಾಸುರ ತಲ್ಪಕೆ ೩

ಇಂದಿರದೇವಿಯು ನಿಂದಿರುವಳು ತವ
ಸುಂದರ ಚರಣಾರವಿಂದವ ತೋರಿಸು ೪

ಶರಣರ ಪೊರೆವ ಕಾರ್ಪರನರಶಿಂಹನೆ
ಹರಗೆ ಭೂಷಣವಾದ ಉರಗಪರ್ಯಂಕಕೆ ೫

## ೧೦೯

ಶ್ರೀದೇವಿ ವರಮಂಚಕೆ ಬರುವದೀಗಲೆ
ಸಖಿಯೆ ಬರುವದೀಗಲೆ ಪ

ಕರಿದಂತ ರಚಿತ ಚರಣ ವರಮೌಕ್ತಿಕ ವಿಲಾಸ
ಪರಿಶೋಭಿತ ಪರಿಯಂಕಕೆ ಬರುವದೀಗಲೆ ೧

ಮಂದರಧರ ಸಮೀರ ವಂದಿತನಂದ ಕುವರ
ಕಂದರ್ಪ ಪಿತನ ಸುಖ ಶಯನಕೆ ಬರುವದೀಗಲೆ ೨

ಏಣಾಂಕ ಬಿಂಬವದನೆ ಸುಶ್ರೋಣಿ ಮಂದಗಮನೆ
ಶ್ರೀ ನಾರಸಿಂಹನ ವರಮಂಚಕೆ ಬರುವದೀಗಲೆ ೩

## ೧೧೦

ಸಖಿ ವಾರಿಜ ಹಾರವನಾ ಶ್ರೀಕೃಷ್ಣನ
ಕೊರಳಿಗೆ ಹಾಕುವೆನಾ ಪ

ಕುಂದಮಲ್ಲಿಗೆ ಅರವಿಂದಗಳಿಂದತಿ
ಸುಂದರ ಹಾರವನಾ ಮು-
ಕ್ಕುಂದನ ಕೊರಳಿಗೆ ಹಾಕುವೆನಾ ೧

ನಾರಿ ದ್ರೌಪದಿಗೆ ಸೀರೆಗಳುಡಿಸಿದ
ಪಾರ ಮಹಿಮದವನಾ ಸಖಿಯೇ ಆ

ಪಾರ ಮಹಿಮಾದವನಾ ೨

ಕರುಣದಿ ಶರಣರ ಪೊರೆಯುವ *ಕಾರ್ಪರ
ನರಹರಿ ಯೆನಿಸುವನಾ ಸಖಿಯೆ
ನರಹರಿಯೆನಿಸುವನಾ ನರಸಿಂಹನ ಕೊರಳಿಗೆ ಹಾಕುವೆನಾ ೩

## ೧೧೧

ಕೊಡುವೆ ತಾಂಬೂಲವ ಪಿಡಿಯೊ ಪಿಡಿಯೊ ದೇವಾ
ಅಡಿಗಳಿಗೆರಗುವೆನಾ ಪ

ಕಡುಹರುಷದಿ ವಿಪ್ರ ಮಡದಿಯರನ್ನವ
ಕೊಡಲು ಭುಂಜಿಸಿದ ಪಾಲ್ಗಡಲ ಶಯನ ಕೃಷ್ಣ ಅ.ಪ

ಮಡದಿಯ ನುಡಿಕೇಳಿ ಕಡುಭಕುತಿಯಲವ
ಪಿಡಿಯವಲಕ್ಕಿಯನು ಕೊಡಲು ಭುಂಜಿಸಿಮಿತ್ರ
ಬಡವ ಸುದಾಮನಿಗೆ ಕೆಡದ ಸಂಪದವನ್ನು
ಗಡನೆ ನೀಡಿದ ದೇವಾ ೧

ಕುಬ್ಜೆಗಂಧಕೆ ಒಲಿದು ಕಬರಿಯ ಪಿಡಿದೆತ್ತಿ
ಸುಭಗರೂಪಳ ಮಾಡಿದ ಅಬ್ಜನಾಭನೆ ತ್ವತ್ಪಾ-
ದಬ್ಜಕರ್ಪಿಸಿದಂಥ ಶಬರಿಯ ಫಲಮೆದ್ದ
ಪ್ರಭು ಶ್ರೀರಾಮನೆ ನಿನಗೆ ೨

ಲಲನೆ ದ್ರೌಪದಾದೇವಿ ಗೊಲಿದಕ್ಷಯಾಂಬರ-
ಗಳನೆ ಪಾಲಿಸಿಪೊರೆದ ಬಲುವಿಧ ಭಕುತರ
ಬಳಗವ ಸಲಹಲು ಇಳೆಯೊಳು ಕಾರ್ಪರ
ನಿಲಯ ಶ್ರೀ ನರಹರಿಯೇ ೩

## ೧೧೨

ಸಿಂಧೂರಗಮನೆ ಸಾರೆ ಮಲಗಿರುವನ್ಯಾರೆ ಪ

ಸಂದರೀ ಮಂದಿರದೊಳಿವನ್ಯಾರೆ
ಸೌಂದರ್ಯದ ಮ್ಯಾರೆ ಛಂದದಲಿ ನೀ ಸಾರೆ
ಇಂದು ನಭದಲಿ ಚರಿಸುತಲಿ ಮನ
ನೊಂದು ಬೇಸರದಿಂದ ಇಲ್ಲಿಗೆ
ಬಂದು ಮಲಗಿಹನೇನೆ ಸುಖದಿ ೧

ಶೀಲೆ ನೋಡಿವನ ಮುಖಕಮಲ
ಸಂಗರದೊಳತಿ ಚಟುಲ ಸುವಿಶಾಲ
ಭುಜಯುಗಲ ಶ್ರೀ ಲಕುಮಿವರ
ಪಾಲ ನಯನ ಮರಾಳ ಧ್ವಜರೊಳ
ಗಾವನೊ ಇವ ಪೇಳುವದು ಕೀಲಾಲಜಾಂಬಕಿ ೨

ನಾರಿ ಮಾತನಾಡಿಸೇ ಇವನ ಮನ
ಮೋಹದವರನ ಕಮನೀಯ
ಗುಣಯುತನ ವಾರಿಜಾಸನ ಮುಖ್ಯ
ಸುರಪರಿವಾರ ಸೇವಿಯ ಕೊಳುವ ಕಾರ್ಪರ
ನಾರಸಿಂಹನೆ ಪವಡಿಸಿಹನೆ ೩

## ೧೧೩

ತೂಗಿರೆ ಗುರುಗಳ ತೂಗಿರೆ ಯತಿಗಳ
ತೂಗಿರೆ ದಾಸಗ್ರೇಸರರ ನಾಗಶಯನನು
ರಾಗವ ಪಡೆವಂಥ ಯೋಗಿವರೇಣ್ಯರ ತೂಗಿರೆ ಪ

ಈ ಮಹಿಯೊಳು ಪುಟ್ಟಿ ಶ್ರೀಮುದತೀರ್ಥ ಸು–
ನಾಮದಿ ಕರೆಸುವರ ತೂಗಿರೆ ಆ ಮುದತೀರ್ಥ

ಶಿಷ್ಯರೊಳು ಪದ್ಮನಾಭ ನಾಮದಿಂದಿರುವರ
ತೂಗಿರೆ ೧

ರಾಮನ ತಂದಿತ್ತ ನರಹರಿ ಮುನಿಪರ
ಮಾಧವ ತೀರ್ಥರ ತೂಗಿರೆ ಆಮ-
ಹಾವಿದ್ಯಾರಣ್ಯರನ ಗೆಲಿದಂಥ
ಶ್ರೀ ಮದಕ್ಷೋಭ್ಯರ ತೂಗಿರೆ ೨

ಕಾಕಿಣಿತೀರಸ್ಥ ಟೀಕಾಚಾರ್ಯರೆಂಬೊ
ನಾಕಪಾಂಶಜರನ ತೂಗಿರೆ ಶ್ರೀಕೃಷ್ಣ
ತಟದಿ ಜಿತಾಮಿತ್ರರೆಂಬೊ ಪಿ-
ನಾಕಿ ಅಂಶಜರನ ತೂಗಿರೆ ೩

ರಾಜರಂದದಿ ಸುಖಭೋಜನ ಕೃದ್ಯತಿ
ರಾಜ ಶ್ರೀಪಾದರ ತೂಗಿರೆ
ವ್ಯಾಜದಿ ವಿಜಯ ಸಾಮ್ರಾಜ್ಯರೆನಿಸಿ
ವ್ಯಾಸರಾಜರು ಮಲಗ್ಯಾರ ತೂಗಿರೆ ೪

ವಾದಿಗಳನು ಯುಕ್ತಿವಾದದಿ ಗೆಲಿದಂಥ
ವಾದಿರಾಜರನ್ನ ತೂಗಿರೆ
ಮೇದಿನಿಯೊಳು ಕೃಷ್ಣದ್ವೈಪಾಯನರೆಂಬೊ
ವೇದವ್ಯಾಸಾತ್ಮಜರ ತೂಗಿರೆ ೫

ಪರಿಮಳ ರಚಿಸಿದ ವರಹಜ ತೀರಸ್ಥ
ಗುರು ರಾಘವೇಂದ್ರರ ತೂಗಿರೆ
ಇರುಳು ಕಾಲದಲಿ ತರಣಿಯ ತೋರಿದ
ಗುರುಸತ್ಯ ಬೋಧರ ತೂಗಿರೆ ೬

ಪರಮತ ಖಂಡನ ನಿರುತದಿ ಮಾಡಿದ
ಗುರುವರದೇಂದ್ರರ ತೂಗಿರೆ

ಗುರು ಭುವನೇಂದ್ರರ ಕರಜವ್ಯಾಸತತ್ವ
ವರಿತ ಯತೀಶರ ತೂಗಿರೆ ೭

ವರಭಾಗವತಸಾರ ಸರಸದಿ ರಚಿಸಿದ
ಗುರುವಿಷ್ಣು ತೀರ್ಥರ ತೂಗಿರೆ
ಪರಮ ಕ್ಷೇತ್ರಕೂಡಲಿಯೊಳಗಿರುವಂಥ
ಗುರುರಘುವೀರರ ತೂಗಿರೆ ೮

ಹರಿಯ ಮಹಿಮೆಯನ್ನು ಸರಸದಿ ಪೇಳಿದ
ಪುರಂದರ ದಾಸರ ತೂಗಿರೆ
ಹರಿಸರ್ವೋತ್ತಮನೆಂದು ಸುರಮುನಿ ಗರುಹಿದ
ಗುರು ವಿಜಯದಾಸರ ತೂಗಿರೆ ೯

ಬನ್ನವ ಬಿಡಿಸಿ ಶಿಷ್ಯನ್ನ ಪಾಲಿಸಿದ
ಭಾಗಣ್ಣ ದಾಸರನ್ನು ತೂಗಿರೆ
ಘನ್ನ ಹರಿಯಗುಣ ವರ್ಣಿಸಿದಂಥ ಜ
ಗನ್ನಾಥ ದಾಸರ ತೂಗಿರೆ ೧೦

ಮಾನವಿರಾಯರ ಪ್ರಾಣಪದಕರಾದ
ಪ್ರಾಣೇಶದಾಸರ ತೂಗಿರೆ
ವೇಣುಗೋಪಾಲನ್ನ ಗಾನದಿ ತುತಿಸಿದ
ಆನಂದದಾಸರ ತೂಗಿರೆ ೧೧

ವಾಸ ಆದಿಶಿಲಾಧೀಶನ್ನ ಭಜಿಸಿದ
ಶ್ರೇಷ್ಠ ದಾಸರನ್ನ ತೂಗೀರೆ
ಶ್ರೇಷ್ಠ ಕಾರ್ಪರ ನರಕೇಸರಿಗತಿಪ್ರೀಯ
ದಾಸೋತ್ತಮರನ್ನ ತೂಗೀರೆ ೧೨

## ೧೧೪

ಜೋ ಜೋ ಶ್ರೀಗುರು ಪ್ರಹ್ಲಾದರಾಜ
ಜೋಜೋ ಭಜಕರ ಕಲ್ಪಮ ಹೀಜ
ಸ್ತಂಭ ದರ್ಶಿತ ನರಮೃಗರಾಜ ಜೋಜೋ
ಭಂಗಾರಕಶಿಪುತನುಜ ಜೋ ಜೋ ೧

ಚಂದ್ರಿಕಾದಿ ಸದ್ಗ್ರಂಥತ್ರಯದಿಂದಾ
ನಂದಿತ ಭೂಮಿ ವೃಂದಾರಕ ವೃಂದಾ
ವಂದಿಪರಘಕುಲ ಪನ್ನಗವೀಂದ್ರ
ವಂದಿಸುವೆನು ಗುರು ವ್ಯಾಸಯತೀಂದ್ರ ೨

ಜೋ ಜೋ ಮಧ್ವಮತಾಂಬುಧಿ ಚಂದ್ರ
ಜೋ ಜೋ ಮಾಯಿ ಮತ್ತೇಭ ಮೃಗೇಂದ್ರ
ಜೋ ಜೋ ಜ್ಞಾನಾದಿ ಸದ್ಗುಣ ಸಾಂದ್ರ
ರಾಜಾಧಿರಾಜ ಶ್ರೀ ಗುರು ರಾಘವೇಂದ್ರ ೩

ಮಂತ್ರಮಂದಿರದಿ ನಿಂತು ಶೇವಕರ
ಚಿಂತಿಪ ಫಲಗಳ ಕೊಡುವ ಉದಾರ
ಎಂತು ತುತಿಸಲಿ ತನ್ಮಹಿಮೆ ಅಪಾರ ಮುಕ್ತಿ
ಪಂಥವ ತೋರಿಸಿ ಮಾಡೊ ಉದ್ಧಾರ ೪

ಗುರುರಾಘವೇಂದ್ರ ನಿಮ್ಮಯ ಶುಭ ಚರಿಯ
ನಿರುತಸ್ಮರಿಪರಘ ತಿಮಿರಕೆ ಸೂರ್ಯ
ಧರಿಸುರ ಶೇವಿತ ಪರಿಮಳಾಚಾರ್ಯ
ಶಿರಿ ಕಾರ್ಪರನರಹರಿ ಗತಿ ಪ್ರಿಯ ೫

## ೧೧೫

ಜೋ ಜೋ ವ್ಯಾಸ ತತ್ವಜ್ಞ ಮುನೀಂದ್ರ
ಜೋ ಜೋ ಮಧ್ವ ಮತಾಂಬುಧಿ ಚಂದ್ರ
ಜೋ ಜೋ ಮಾಯಿ ಮತ್ತೇಭ ಮೃಗೇಂದ್ರ
ಜೋ ಜೋ ಭಕ್ತ್ಯಾದಿ ಸದ್ಗುಣ ಸಾಂದ್ರ ಜೋ ಜೋ ೧

ವೇಣುಗೋಪಾಲ ಪದಾಂಬುಜ ಭೃಂಗ
ವೇಣಿ ಸೋಮಪುರ ಸುಧಾಮಶುಭಾಂಗ
ಆ ನತಜನ ಸುರಧೇನು ಕೃಪಾಂಗ
ಮಾನಿತ ಸದ್ವಿಜಯಯತಿ ಕುಲೋತ್ತುಂಗ ೨

ಭೂಮಿ ಸುರಸ್ತುತ ಪಾವನ ಚರಿತ
ಸೌಮಿಭಕ್ತ ಕಾಮಿತದಾತ
ಸ್ವಾಮಿ ಶ್ರೀಕಾರ್ಪರ ನರಮೃಗನಾಥ
ಪ್ರೇಮ ಪಾತ್ರ ಭವ ಜ್ಞಾನ ಪ್ರದಾತ ೩

## ೧೧೬

ಮಂಗಲ ಮಾನವಿ ನಿಲಯ ಕವಿಗೇಯ
ಗುರುರಾಯ ಗುರುರಾಯ ಪಿಡಿಕೈಯಾ ಪ

ಪರಮ ಕರುಣದಲಿ ವಿರಚಿತ ಶ್ರೀ ಮ–
ಧ್ವರಿಯ ಕಥಾಮೃತ ಗ್ರಂಥ ಶುಭ್ರ
ಚರಿತ ಜಗನ್ನಾಥ ಜಗನ್ನಾಥ ಪ್ರಖ್ಯಾತ ೧

ಮೇದಿನಿ ಸುರರಿಗೆ ಮೋದಮುನಿ ಮತದ
ಭೇದ ಪಂಚಕ ಸುಬೋಧ ಪ್ರದರಾದ ಸ–
ಹ್ಲಾದ ಕೊಡು ಮೋದ ೨

ಶರಣು ಜನಕೆ ಸುರತರುವೆಂದೆನಿಸಿದ
ಸಿರಿಕಾರ್ಪರ ಶುಭನಿಲಯ
ನರಹರಿಯ ಸುಪ್ರೀಯ ಸುಪ್ರೀಯ ದಾಸಾರ್ಯ ೩

## ೧೧೭

ಬಾಳೊ ಸುಖದಿ ಬಾಲನೆ ವರಗುಣ ಶೀಲನೆ ಪ

ಬಾಳೊ ಸುಖದಿ ಬಹುಕಾಲಶ್ರೀವೇಣು ಗೋ-
ಪಾಲನ ದಯದಿ ಸುಶೀಲ ಸತಿಯಳ ಕೂಡಿ ೧

ವಾಯುಸುತನ ಪಾದ ತೋಯಜ ಸ್ಮರಿಸುತ
ಕಾಯದಾರೋಗ್ಯದೀರ್ಘಾಯುತ್ವವ ಪಡೆದು ೨

ಕೃದ್ಧನಾಗದೆ ಜ್ಞಾನ ವೃದ್ಧರಸೇವಿಸಿ
ಮಧ್ವಮತದ ತತ್ವ ಶ್ರದ್ಧದಿ ಕೇಳುತ ೩

ತಂದೆ ತಾಯಿಗಳಲ್ಲಿ ಇಂದಿರೆರಮಣನೆ
ನಿಂದು ಪಾಲಿಪನೆಂದು ವಂದನೆ ಪಾಡುತ ೪

ಭಕ್ತಿಯಿಂದತಿಥಿಗಳ ನಿತ್ಯದಿ ಸೇವಿಸುತ
ಪುತ್ರ ಪೌತ್ರಾದಿ ಸಂಪತ್ತಿಯ ಪಡೆದು ೫

ಭೂಸುರರೊಡಗೂಡಿ ತೋಷದಿಕೃತ ಹರಿ
ವಾಸರ ವ್ರತ ಫಲ ಶ್ರೀಶನಿಗರ್ಪಿಸುತ ೬

ಧಾರುಣಿಯೊಳು ಕೃಷ್ಣಾತೀರ ಕಾರ್ಪರನಿಲಯ
ನಾರಸಿಂಹನ ಪದ ವಾರಿಜ ಸೇವಿಸುತ ೭

## ೧೧೮

ಘನ ಸುಖಮಂ ಪಡಿ ಇನಿಯನ ವಶದಿ
ಮನಸಿಜನಯ್ಯನ ದಯದಿಂದ ಬಾಲೆ ಪ

ಮನೆಗೆಲಸಗಳನು ದಿನಗೈಯುತ ಬಲು
ವಿನಯ ಸೌಶೀಲ್ಯದಿ ವನಿತೆಯರೊಳು ನೀ ೧

ಪತಿಯನು ಪರದೇವತೆಯೆಂಬುವ ಮಹಾ
ಮತಿಯಲಿ ಸೇವಿಸಿ ಸುತರನು ಪಡೆದು ನೀ ೨

ಗುರುಜನರಿಗೆ ಸದಾಶಿರಬಾಗುತ ಬಹು
ಸರಸದಿ ಸದ್ಗುಣಾಭರಣಗಳಿಂದ ನೀ ೩

ರತಿಪತಿ ಪಿತನಿಗೆ ಪ್ರತಿಮೆಗಳೆನ್ನುತ
ಅತಿಥಿಗಳನು ಸಂತತ ಸತ್ಕರಿಸುತ ೪

ಗಿರಿಜೆಯ ಪೂಜೆಯನು ನಿರುತದಿಗೈಯುತ
ಸಿರಿಕಾರ್ಪರ ನರಹರಿಯನು ಸ್ಮರಿಸುತ ೫

## ೧೧೯

ಹಿತದಿ ಜೀವಿಸು ಬಾಲೆ ಸುಮಂಗಲೆ
ಹಿತದಿ ಜೀವಿಸು ಬಾಲೆ ಪತಿಯ ಪ

ಸೇವಾನುಕೂಲೆ ಕ್ಷಿತಿಯೊಳಗೆ
ಪತಿವ್ರತಾ ಧರ್ಮನಿರತಳೆನಿಸಿ ಬಹುಸುತರ ಪಡೆದು ಅ.ಪ

ರತಿಪತಿಪಿತನಿಗೆ ಪ್ರತಿಮೆಗಳೆನಿಸುವ
ಅತಿಥಿಗಳ ಸಂತತ ಸುಶೇವಾ–
ರತಳು ಬಹು ಗುಣವತಿಯುಳೆನಿಸುವ ೧

ಗುರುಜನರಿಗೆ ಸದಾ ಶಿರಬಾಗಿ ನಡೆಯುತ
ಹರುಷದಲಿ ಹರನರಸಿಯಳ ಪದ
ಸರಸಿಜದಿ ಮನವಿರಿಸಿ ಪೂಜಿಸಿ ೨

ಶರಣು ಜನಕೆ ಸುರತರುವೆನಿಪ ಕಾರ್ಪರ
ಸಿರಿಮನೋಹರ ನರಹರಿಯ ಶುಭ
ಚರಣಯುಗಲವ ಸ್ಮರಿಸುತನುದಿನ ೩

# ಅನುಬಂಧಗಳು

೧. ಕಠಿಣ ಪದಗಳ ಅರ್ಥ

೨. ಪ್ರಾದೇಶಿಕ ಪದಸೂಚಿ

೩. ವಿಶೇಷ ಟಿಪ್ಪಣಿಗಳು

೪. ಕೀರ್ತನೆಗಳ ಅಕಾರಾದಿ

# ಅನುಬಂಧ - ೧

## ಕಠಿಣಪದಗಳ ಅರ್ಥ

ಅವನೀಶ = ದೊರೆ
ಅವನಿ = ಭೂಮಿ
ಅನಿಶ = ಪ್ರಕಾಶ, ಕತ್ತಲಿಲ್ಲದ
ಅಜ = ಬ್ರಹ್ಮ
ಅನವರತ = ನಿರಂತರ
ಅನುಜ = ತಮ್ಮ
ಅರಿ = ಅಯುಧ
ಅಮರರು = ದೇವತೆಗಳು
ಅರಿ = ವೈರಿ
ಅನಿಮಿಷಪಜನಸುತಾ = ಇಂದ್ರನ ಮಗ ಅರ್ಜುನನ ಸುತ
ಅನುರಾಗ = ಪ್ರೀತಿ
ಅರುಣವಸನ = ಕಾವಿಬಟ್ಟೆ
ಅಕೂಪಾರ = ಆಳವಲ್ಲದ
ಅಘ = ತಪ್ಪು
ಅಱಿ = ದೋಷ
ಅವನಿಧರ = ಕೃಷ್ಣ
ಅರ್ಭಕ = ಬಾಲ
ಅದ್ರಿ = ಪರ್ವತ
ಅಂಬಕ = ಕಣ್ಣು
ಅಂದಣ = ಪಲ್ಲಕ್ಕಿ
ಅಂಬು = ನೀರು
ಅಂಬುಧಿ = ಸಮುದ್ರ
ಅಂಗಾರ = ಇದ್ದಿಲು
ಅಂಬುಜ = ಕಮಲ

ಅಂಬುದ = ಮೋಡ
ಅಂಗನೆ = ಸ್ತ್ರೀ
ಅಂತಕ = ಯಮ
ಅಂಘ್ರಿ = ಪಾದ
ಅಗ್ರಜ = ಅಣ್ಣ
ಅಭ್ರ = ಮೋಡ
ಅಭಯ = ಭಯವಿಲ್ಲದ
ಅವತೀರ್ಣ = ಉದ್ಭವ
ಆರೂಢ = ಏರಿದ, ಹತ್ತಿಕೂತ
ಆಮಯ = ದು:ಖ
ಆನನನಿಗೆ = ಮುಖವುಳ್ಳವನಿಗೆ
ಆಗಾರ = ಮನೆ
ಆಸನ = ಪೀಠ
ಆಲಯ = ಮನೆ
ಆಕರ್ಣಿಸಿ = ಕೇಳಿ
ಆಕ್ರೋಶ = ಸಿಟ್ಟು
ಇಳೆ = ಭೂಮಿ
ಇಂದುಧರಾತ್ಮಜ = ಚಂದ್ರನನ್ನು ಧರಿಸಿದ ಶಿವನ ಮಗ
ಇಂದು ಮೌಳಿ = ಶಿವ
ಇಳಿದೇವ = ವಿಪ್ರ
ಉದಕ = ನೀರು
ಉದಕಜಕಾರ್ಕನು=ಸೂರ್ಯನು
ಉದಧಿ = ಸಮುದ್ರ
ಉಗ್ರಸನಾ = ಕಠಿಣವಾದ ಯೋಗಾಸನ

ಎರ್ಡೆ = ಎರಡನೆ
ಎರಡು ಪ್ರತಿಮೆ = ಚಲ ಮತ್ತು ಅಚಲ
ಕದನ = ಯುದ್ಧ
ಕಪಿಪ = ವಾಯುದೇವರು
ಕಬರಿ = ತುರುಬು
ಕಪಿ = ಕೋತಿ
ಕಡಲತನುಜೆ = ಲಕ್ಷ್ಮೀ
ಕಂದರ್ಪ = ಶಿವ
ಕನಕಗರ್ಭತನಯ= ಬ್ರಹ್ಮತನಯ ನಾದನಾರದ
ಕಳವುತಲೆ = ಕಳೆಯುತ
ಕಾಯಜ = ಮನ್ಮಥ
ಕಾಸೋಸಿ = ಕಸ ವಿಸಿ, ಸಂಕಟ
ಕಾದಂಬಿನಿ = ಮೋಡ
ಕೋಕನದ = ಕೆಂಪುಕಮಲ
ಕರಧೃತ = ಕರದಲ್ಲಿ ಧರಿಸಿದ
ಕೇಸರಿ = ಸಿಂಹ
ಕುಜನವನ = ದುಷ್ಟಜನ ಸಮೂಹ
ಕುಠಾರ = ಶಸ್ತ್ರ
ಕೀಲಾಲಜ = ಕಮಲ
ಕುಂದರದನೆ = ಅರಳಿದ ಮಲ್ಲಿಗೆಯಂತೆ ಶುಭ್ರವಾದ ದಂತ ಪಂಕ್ತಿಯುಳ್ಳವಳು
ಕುರುಂಗ ನೇತ್ರೆಯರು =ಹರಿಣದಂತೆ ಕಣ್ಣುಳ್ಳವರು
ಕುಂದಣ = ಚಿನ್ನ
ಕಂತುಜನಕ = ವಿಷ್ಣು
ಕ್ಲೇಷ = ಕಷ್ಟ
ಖಳ = ರಕ್ಕಸ, ಕ್ರೂರ
ಖಗ = ಆಕಾಶದಲ್ಲಿ ಚರಿಸುವ
ಖೇಚರ = ಗಗನದಲ್ಲಿ ಸಂಚರಿಸುವ
ಗಡಣ = ಸಮೂಹ
ಗಂಹ್ವರ = ಗವಿ
ಗೀರ್ವಾಣರು = ದೇವತೆಗಳು
ಗೃಹ = ಮನೆ
ಚಂದ್ರಮೌಳಿ = ಈಶ್ವರ
ಚಂದನ = ಶ್ರೀಗಂಧ
ಚರ್ಯಾ = ವರ್ತನೆ
ಚೋರಹರ = ವರಾಹವತಾರ
ಚಾರು = ಸುಂದರ
ಚಾಮೀಕರ = ಚಿನ್ನ
ಚಾಂಪ = ಧನುಸ್ಸು
ಜಡಜಭವ = ಬ್ರಹ್ಮ
ಜಡಜಾಪ್ತ = ಸೂರ್ಯ
ಜವದಿ = ತೀವ್ರದಿ
ಜಡಜನಾಭ = ವಿಷ್ಣು
ಜಿತಮದನ = ಕಾಮನನ್ನು ಗೆಲಿದವ
ಜಿಹ್ವೆ = ನಾಲಿಗೆ
ಜಂತುನಿಂದಿತ = ಬೌದ್ಧವತಾರ
ಜರದೂರ = ಮುಪ್ಪಿಲ್ಲದ
ತಾತ = ತಂದೆ
ತೂರ್ಣಾ = ತೀವ್ರವಾದ, ಚಪಲ
ತೋಕ = ಪುತ್ರ
ತೋಪಾದಿ = ಸಂತೋಷದಿ
ತುರಗ ಗ್ರೀವ = ಕುದುರೆಯಂತೆ ಕುತ್ತಿಗೆಯುಳ್ಳವನು
ತೋಯಜ = ಕಮಲ
ತಾಮರಸ = ಕಮಲ
ತರಂಗ = ಅಲೆಗಳು
ತುರು = ಗೋವು
ತತಿ = ಸಮೂಹ
ತುರುಪಾಲ = ಗೋಪಾಲ

ತುರುಂಗ = ಕುದುರೆ
ತನಯ = ಮಗ
ತ್ವರ = ತೀವ್ರ
ತಾರಿಸಿದಾ = ರಕ್ಷಿಸಿದಾ
ತ್ರಾಣ = ಶಕ್ತಿ
ತ್ರಿನೇತ್ರ = ಮೂರು ಕಣ್ಣುಳ್ಳ ಶಿವ
ತ್ರಿಪಥಗಾಮಿನಿ = ಗಂಗೆ
ತಿಂಗಳ = ಚಂದ್ರ
ತರು = ವೃಕ್ಷ
ತ್ರಿದಶರು = ದೇವತೆಗಳು
ತಿಮಿರ = ಕತ್ತಲು
ತೋಷ = ಆನಂದ
ತ್ರಿದಶ = ಮೂವ್ವತ್ತು
ದಾರ = ಯಾರ
ಧಟ್ಟಿ = ಚಿಕ್ಕಸೀರೆ
ಧವ = ಪತಿ
ದಾನವೇಷ = ಅಸುರರ ಒಡೆಯ
ಧೇನು = ಆಕಳು
ಧರಣಿಜಾ = ಸೀತೆ
ದಶಕಂಧರ = ಹತ್ತು ತಲೆಯುವ ರಾವಣ
ದೇವತರು = ಕಲ್ಪವೃಕ್ಷ
ದಿವಿಜರು = ದೇವತೆಗಳು
ದಿವಾಕರ = ಸೂರ್ಯ
ಧಾಮ = ಮನೆ
ದಂಷ್ಟ್ರ = ದಾಡೆ (ಕೋರೆಹಲ್ಲು)
ದಿಗ್ವಲಯ = ದಿಕ್ಕುಗಳು
ದೃಗ್ಬಾಷವ = ಆನಂದಾಶ್ರು
ದಿತಿಜಾಧಿಪನು = ದಿತಿಯ ಮಕ್ಕಳಾದ ದೈತ್ಯರ ದೊರೆ
ಧುರದೊಳು = ಯುದ್ಧದೊಳು
ದೋರುಬಂಧನ = ದಾರ ಭರಿಸುವುದು

ನೀರದವರ್ಣ = ಮೋಡದ ಬಣ್ಣವುಳ್ಳವ ವಿಷ್ಣು
ನಾಗಾಭರಣ = ನಾಗನನ್ನು ಆಭರಣವಾಗುಳ್ಳ ಶಿವ
ನುತ = ಸ್ತುತಿಸಲ್ಪಡುವ
ನತ್ತು = ಮೂಗಿನಲ್ಲಿ ಧರಿಸುವ ಆಭರಣ
ನೆಂಬಲು = ನಂಬಲು
ನವನೀತ = ಬೆಣ್ಣೆ
ನಖ = ಉಗುರು
ನರಜಗ ಮಾವಾ = ಅಭಿಮನ್ಯುವಿನ ಮಾವ, ಕೃಷ್ಣ
ನಭ = ಆಕಾಶ
ನೃಪ = ದೊರೆ
ನಾರ = ಜ್ಞಾನ
ನಾಕ = ಸ್ವರ್ಗ
ನಾಗರಿವಾಹನ = ಗರುಡ
ನಿಕಟ = ಸಮೀಪ
ನಿಶಾಪತಿ = ಚಂದ್ರ
ನಿರ್ಜರರು = ದೇವತೆಗಳು
ನಿಕಾಯ = ಸಮೂಹ
ನಿಲಯ = ಮನೆ
ನೀರಜಾಸನ = ಬ್ರಹ್ಮ
ನಿಷ್ಕಾಮ = ಕಾಮನಾರಹಿತ
ನಿಕರ = ಸಮೂಹ
ನಿಶಿ = ಕತ್ತಲು
ನಕೇತನ = ಮನೆ
ನಿಚಯ = ಸಮೂಹ
ನಿನದ = ಶಬ್ದ
ಪಂಕಜನಾಭ = ವಿಷ್ಣು
ಪಂಕಜಮುಖಿ = ಕಮಲಮುಖಿ
ಪರಿವೃಢಾ = ಆವರಿಸಿದ

ಪರ್ಣ = ಎಲೆ
ಪರಮೇಷ್ಠಿ = ಬ್ರಹ್ಮ
ಪವನಪ = ವಿಷ್ಣು
ಪರಿವಾಣಯ = ವಿವಾಹ
ಪದ್ಮಾನನೆ =ಕಮಲದಂತೆ ಮುಖವುಳ್ಳ
ಪಯೋನಿಧಿ = ಹಾಲಿನ ಸಮುದ್ರ
ಪಂಕಜ = ಕಮಲ
ಪರಿಯಂಕ = ಹಾಸಿಗೆ
ಪನ್ನಗಾರಿಧ್ವಜ = ಗರುಡ
ಪವಿ = ವಜ್ರ
ಪಾರ್ವತೀಶ = ಈಶ್ವರ
ಪ್ರಾಪಕ = ಪ್ರಾಪ್ತ
ಪಾತಕ = ಪಾಪ
ಪಾವಮಾನಿ = ವಾಯು
ಪಾಶ = ಹಗ್ಗ
ಪ್ರಾಪ್ತಿ = ಪಡೆದುಕೊಳ್ಳವುದು
ಪೀಯೂಷ = ಅಮೃತ
ಪಿಪ್ಪಲ = ಅಶ್ವಥವೃಕ್ಷ
ಪಿನಾಕಿ = ಈಶ್ವರ
ಪುಂಗವ = ಶ್ರೇಷ್ಠ
ಪುರುಹೂತ = ಇಂದ್ರ
ಪುನೀತ = ಪವಿತ್ರ
ಫಣಿ = ಹಾವು
ಫಾಲ = ಹಣೆ
ಬಡಿವಾರ = ವಯ್ಯಾರ
ಬುಧಜನ = ಪಂಡಿತರು
ಬಿಕ್ಕಳುವ = ಬಿಕ್ಕಿ ಬಿಕ್ಕಿ ಅಳುವ
ಬಿಸ = ಕಮಲದದೇಟು
ಬಿಡಾಜ = ಯಮಧರ್ಮ
ಭರ್ತ ಪಾಲಿತಾ = ಸೇವಕರನ್ನು ರಕ್ಷಿಸುವವ
ಭಲ್ಲೂಕ = ಕರಡಿ

ಭೂವಿಂದಾ = ದೊರೆ
ಭಂಜಿಸು = ಸಂಹರಿಸು
ಭುವನ = ಪ್ರಪಂಚ
ಭೂಧರ = ಅರಸು
ಭಟ = ಸೇವಕ
ಭವಹರ = ಹುಟ್ಟುಸಾವುಗಳ ಜಗತ್ತಿನ ನಿವಾರಕ
ಭಾಸ್ಕರ = ಸೂರ್ಯ
ಭೂಜ = ವೃಕ್ಷ
ಭುವನ = ಜಗತ್ತು
ಭ್ರಾತ್ರರು = ಸೋದರರು
ಭೃತ್ಯ = ಸೇವಕ
ಭೀತ = ಅಂಜಿದ
ಮನಸಿಜ = ಕಾಮ
ಮನಸಿಜಪಿತನು = ವಿಷ್ಣು
ಮಂದರಧರ = ಮಂದರಗಿರಿಯನ್ನು ಎತ್ತಿದ ಕೃಷ್ಣ
ಮಂದಾರ = ಕಮಲ
ಮಹಂತ = ಪೂಜಾರಿ, ಅರ್ಚಕ
ಮಧುಪ = ಜೇನುನೊಣ
ಮರಾಳ(ಅಮರಾಳ) = ಒಂದು ಪಕ್ಷಿಯ ಹೆಸರು
ಮಹಿ = ಭೂಮಿ
ಮತ್ತೇಭ = ಆನೆ
ಮಂದಸ್ಮಿತ = ಮುಗುಳ್ನಗೆ
ಮಾಡುತೀವಾ = ಮಾಡುತಿರುವ
ಮಾಸ = ತಿಂಗಳು
ಮಾರಿ = ಮುಖ
ಮಾತುಲ = ಸೋದರಮಾವ
ಮಾರಾರಿ = ಶಿವ
ಮುದ್ರಿಕೆ = ಉಂಗುರ
ಮೇದಿನಿ = ಭೂಮಿ
ಮೇಘತತಿ =ಮೋಡಗಳ ಸಮೂಹ

ಮೋದ = ಆನಂದ
ಮ್ಯಾಳ = ಮೇಳ, ಗುಂಪು
ಮೃತ್ಯುಂಜಯ = ಶಿವ
ಮೃಡ = ಶಿವ
ಮೃತ್ತಿಕೆ = ಮಣ್ಣು
ಮೃಗಲಾಂಛನಮುಖಿ = ಚಂದ್ರಮುಖಿ
ಯವನಕುಲ = ಮುಸ್ಲಿಂಜನಾಂಗ
ಯುಗಳ = ಜೋಡಿ(ಎರಡು)
ಯೂಪ = ಸ್ತಂಭ
ರೂಢೀಶ = ಜಗದೊಡೆಯ
ರಣ = ಯುದ್ಧ
ರಿಪು = ವೈರಿ
ರುಹ = ವೃಕ್ಷ
ಲಲನೆ = ಸ್ತ್ರೀ
ವದನ = ಮುಖ
ವಲ್ಲಭ = ಪತಿ
ವನ = ನೀರು, ಅಶ್ರು
ವದನೇಂದು =ಚಂದ್ರನಂತೆ ಮುಖವುಳ್ಳವ
ವಸುದೆ = ಭೂಮಿ
ವತ್ಸ = ಕರು
ಏಣಾಂಕಬಿಂಬವದನೆ= ಚಂದ್ರವದನೆ
ವಟು = ಬಾಲಕ
ವಂಧ್ಯೆ = ಬಂಜೆ
ವಾರಿಚರ = ನೀರಿನಲ್ಲಿ ಚಲಿಸುವ ವಿಷ್ಣುವಿನ ಮಚ್ಛರೂಪ
ವಾರಿಜೋದ್ಭವ = ಬ್ರಹ್ಮ
ವಾರಿಧಿ = ಸಮುದ್ರ
ವಾಸವಾನುಜ = ಇಂದ್ರನ ತಮ್ಮ ಉಪೇಂದ್ರ
ವಾಂಛಿತ = ಬಯಸಿದ, ಇಚ್ಛಿಸಿದ
ವಾಸವ = ಇಂದ್ರ
ವಾರಣ = ಆನೆ
ವಾರಿದ = ಮೋಡ
ವಾರಿ = ನೀರು
ವೃತ್ರಾರಿ = ವೃತ್ರನೆಂಬ ಅಸುರನ ವೈರಿ ಇಂದ್ರ
ವೃಷ್ಟಿ = ಮಳೆ
ವೃಜಿನ ವಾರಿಧಿ = ಪಾಪವೆಂಬ ಸಮುದ್ರ
ವಿಬುಧ = ಜ್ಞಾನಿ
ವಿಧುವದನೆ =ಚಂದ್ರನಂತೆ ಮುಖವುಳ್ಳವಳು
ವಿಭವ = ವೈಭವ
ವಿನತಾತ್ಮಜ = ಗರುಡ
ವಿಹಂಗ = ಪಕ್ಷಿ
ವಿಪ್ರ = ಬ್ರಾಹ್ಮಣ
ವಿಲಸಿತ = ಅರಳಿದ
ವಿರಿಂಚಿ = ಬ್ರಹ್ಮ
ವೀಶಗಮನ = ಗರುಡಗಮನ
ವ್ಯಾಳ = ಹಾವು
ವ್ಯಾಸಸೂತ್ರಗಳು = ಬ್ರಹ್ಮಸೂತ್ರಗಳು
ವ್ಯೋಮಕೇಶ = ಈಶ್ವರ
ವ್ಯಜನ = ಛತ್ರ, ಚಾಮರ
ವೇಣು = ಕೊಳಲು
ಶರ್ವ = ಈಶ್ವರ
ಶಶಿ = ಚಂದ್ರ
ಶರ್ವರು = ದೇವತೆಗಳು
ಶತ = ನೂರು
ಶೋಕ = ದು:ಖ
ಶೋಣಿತವಸ್ತ್ರನೆ = ನಾರದ
ಶಿಲೆ = ಕಲ್ಲು
ಶೇಷಭೂಷಣ = ಶಿವ
ಶ್ಯಂದನ = ರಥ
ಶೃಣ್ವತಾ = ಕೇಳುವ

ಶೃತಿತತಿ = ವೇದಸಮೂಹ
ಶೈಲಕುಮಾರಿ = ಪಾರ್ವತಿ
ಷಟ್ಪದ = ದುಂಬಿ
ಷಷ್ಠಿ = ಅರವತ್ತು
ಷೋಡಶ = ಹದಿನಾರು
ಸದನ = ಮನೆ
ಸಂದೇಹ = ಸಂಶಯ
ಸಂಹನನ = ದೇಹ
ಸರ್ಪತಲ್ಪನ =ಹಾವನ್ನು ಹಾಸಿಗೆಯಾಗಿ ವುಳ್ಳವನು ಶ್ರೀಹರಿ
ಸವಿತ = ಬೆಳಕು
ಸಮೀರ = ವಾಯು
ಸಂಪ್ರಾಪ್ತ = ದೊರೆತ
ಸಂಸ್ಕೃತಿ = ಸಂಸ್ಕಾರ
ಸರ್ಗ = ಸೃಷ್ಟಿ ನೋಡಬೇಕು
ಸ್ಯಂದನ = ರಥ
ಸುರತರು = ಕಲ್ಪವೃಕ್ಷ
ಸುರವ್ರಾತ = ದೇವತೆಗಳ ಗುಂಪು
ಸುರವಿನುತ =ದೇವತೆಗಳಿಂದ ಸ್ತುತಿಸಿಕೊಳ್ಳುವ
ಸುರನದಿ = ಗಂಗಾನದಿ
ಸೂತ್ರಾಮ = (ಇಂದ್ರ ?)
ಸೂರಿಗಳು = ದೇವತೆಗಳು
ಸಿಂಧು = ಸಮುದ್ರ
ಸಿಂಧೂರವದನ = ಆನೆಯ ಮುಖವುಳ್ಳವ
ಸ್ಥಿರಚರ = ಜಡ–ಚೇತನ
ಸೋಮ = ಚಂದ್ರ
ಸೊನ್ನೊಡಲಾಂಡಗ = ಬ್ರಹ್ಮ
ಸ್ತೋಮ = ಸಮೂಹ
ಸಾಯಕ = ಬಾಣ
ಹಯಚರ = ಕಲ್ಕಿ
ಹರಣ = ಪ್ರಾಣ
ಹರಿಮುಖ =ಕುದುರೆಯ ಮುಖವುಳ್ಳವ, ವಿಷ್ಣು
ಹಸ್ತ = ಕೈ
ಹಯ = ಕುದುರೆ
ಹಿಂಡು = ಗುಂಪು
ಹೇಮ = ಬಂಗಾರ
ಕ್ಷೋಣಿ = ಭೂಮಿ
ಕ್ಷಿತಿ = ಭೂಮಿ
ಕ್ಷೀರ = ಹಾಲು
ಕ್ಷಿಪ್ರ = ಬೇಗನೆ

# ಅನುಬಂಧ - ೨

## ಪ್ರಾದೇಶಿಕ ಪದಸೂಚಿ

ಮ್ಯಾಳ = ಗುಂಪು
ತ್ರಾಣ = ಶಕ್ತಿ
ಹಿಂಡು = ಗುಂಪು, ಹಾಲನ್ನು ಹಿಂಡುವುದು
ಜಂಗುಳಿ = ಸಮೂಹ
ಥಟ್ಟನೆ = ತಕ್ಷಣ
ಛಂದ = ಸುಂದರ
ಪಾರಣಿ = ಪ್ರಾಣಿ
ಮೀಸಲು = ತೆಗೆದಿರಿಸಿದ
ಖರೆ = ಸತ್ಯ
ಯಡರುಗಳು = ತೊಂದರೆಗಳು
ಗಡನೆ = ಬೇಗನೆ
ಹಟ್ಟಿ = ಕುರಿಗಳನ್ನು ಒಂದೆಡೆ ಸೇರಿಸುವ ಸ್ಥಳ
ಖಿನ್ನ = ಖೇದ
ಬಾಗಿಪ = ಕಸಬರಗೆ
ಬ್ಯಾಗೆ = ಬೇಗ
ಬಳಗ = ಬಂಧುಗಳು ಸಂಬಂಧಿಗಳು
ಮ್ಯಾರೆ = ಮೇರೆ
ಮಲಗ್ಯಾದ= ಮಲಗಿದ್ದಾರೆ
ಬನ್ನ = ಕಷ್ಟ
ಪಡಿ = ಪಡೆದುಕೊ, ಹೊಂದು, ದಾಬೇಳ, ಅಕ್ಕಿ ಬೆಲ್ಲ, ತುಪ್ಪದಕ್ಷಿತಿ ಸಮೇತ ಶ್ರಾದ್ಧ ಆಚರಣೆ

ಅಟ್ಟಲೆ = ತುಂಟಾಟ
ಅಡಕಲು = ಧಾನ್ಯಗಳನ್ನು ತುಂಬಿಇಡುವ ಸಣ್ಣ ಸಣ್ಣ ಮಣ್ಣಿನ ಗಡಿಗೆಗಳು
ನೆಲವು = ಹಾಲು, ಮೊಸರಿನ ಪಾತ್ರೆ ಇಡಲು ಹಗ್ಗದಿಂದ ತಯಾರಿಸಿದ, ತೂಗು ಹಾಕುವ ಸಾಧನ
ಸಾಸಿನಾರತಿ= ಸಾಸೆಹಿಟ್ಟಿನ ಆರತಿ
ಚಬುಕ = ಬಾರುಕೋಲು
ಆಕಳಕಣ್ಣಿ = ಆಕಳದ ಬಾಯಿಗೆ ಕಟ್ಟುವ ಸಾಮಗ್ರಿ
ಸಿಂಬಿ = ಬಟ್ಟೆಯನ್ನು ದುಂಡಗೆಸುತ್ತಿ ತಲೆಯ ಮೇಲೆ ಇಡುವುದು
ಹರಿಹಾಯು = ಸಿಡುಕುಗೊಳ್ಳು
ಕಾಸೋಸಿ = ಕಸಿವಿಸಿ
ಚರ್ಯಾ = ವರ್ತನೆ
ದಾರ = ಯಾರ
ದಟ್ಟಿ = ಚಿಕ್ಕಸೀರೆ (ಚಿಕ್ಕ ಹುಡುಗಿಯರಿಗೆ ಉಡಿಸುವುದು )
ನೆಂಬಲು = ನಂಬಲು
ಬಡಿವಾರ = ವಯ್ಯಾರ

# ಅನುಬಂಧ – ೩

## ವಿಶೇಷ ಟಿಪ್ಪಣಿಗಳು

ಕಾರ್ಕೋಟ ನರಹರಿ.

೨೨೯ ೧

**(ನುಡಿ ೧) ಮಧು ವಿರೋದಿ:** ಮಧು ನಾಮಕ ದೈತ್ಯನನ್ನು ಸಂಹರಿಸಿದ ದೇವ ಶ್ರೀಹರಿ.

೨೨೯

**(ನುಡಿ ೨) ಕುಂಭ ಸಂಭವ** : ಶರಧಿಜೆ= ಲಕ್ಷ್ಮಿ

೨೩೦ ೨

ಪಲ್ಲ ನರಮೃಗಾಕಾರನ = ನರಸಿಂಹಾವತಾರ

೨೩೦ ೨

(ನುಡಿ ೧) ದೇವತರು= ಕಲ್ಪತರು

೨೩೦ ೨

**(ನುಡಿ ೪) ಹೃದಯದಿ ಪೊಳೆವ:** ( ಬಿಂಬ ದರ್ಶನ )

೨೩೦ ೨

**(ನುಡಿ ೫) ತ್ರಿಗುಣತೀತ** : ( ರಾಜಸ, ತಾಮಸ, ಸಾತ್ವಿಕ, ಗುಣದಿಂದ ಅತೀತನಾದವ ಶ್ರೀಹರಿ )

೨೩೧ ೩

**( ನುಡಿ )** : ಷಡ್ರಿಪು= ಕಾಮ, ಕ್ರೋಧ, ಮದ, ಮತ್ಸರ, ಲೋಭ, ಮೋಹ

**(ನುಡಿ ೨)** : ನಂದಾತ್ಮಜಳೆ = ದುರ್ಗಾದೇವಿ ಅವತಾರ

**(ನುಡಿ ೨) ಇಂದುಕುಲದಿ:** ಜನಿಸಿ = ಭೀಮಾವತಾರ – (ಚಂದ್ರವಂಶದಲ್ಲಿ–ಪಾಂಡವರಲ್ಲಿ–ಜನಿಸಿ)

**(ನುಡಿ ೩)** ಮೋದ ಮುನಿಯೆನಿಸಿ – ಮಧ್ವಾಚಾರ್ಯರು

ಭೇದವ ಬೋಧಿಸಿ = ದ್ವೈತ ತತ್ವ ಬೋಧನೆ

**(ನುಡಿ ೧):** ಜೀವೋತ್ತುಮಾನೀನೆನ್ನುತ ?

**(ನುಡಿ ೩):** ಇಂದ್ರಜನನ್ನೆನಿಸಿ= ಇಂದ್ರನಮಗ ಅರ್ಜುನನಿಗೆ ಅನಗೆಸೆ

**(ನುಡಿ [illegible]):** ಪರಮರ್ದನ = ತ್ರಿಮಿಕಗರನ್ನು ದಹಿಸಿದ ಶಿವ

**(ನುಡಿ ೨):** ಜರಾಸಂಧ ಮುಖರನು ಗದೆಯಿಂದವರಿಸಿ ?

**(ನುಡಿ ೧):** ಧಾಮ ಕಿಂಪುರುಷದಲ್ಲಿವಾಯು ಹನುಮ ದೇವರು ಇಂದಿಗೂ ಕಿಂಪುರುಷ ಖಂಡದಲ್ಲಿ ಶ್ರೀರಾಮ ನಾಮ ಸಂಕೀರ್ತನೆ ಗೈಯುತ್ತಿರುವ ವಿಚಾರ

**(ನುಡಿ ೪):** ಇಂದ್ರದಿಕ್ಕಿನದ್ವಾರ = ಪೂರ್ವದಿಕ್ಕು

**(ನುಡಿ [illegible]):** ನರಸಿಂಗನಿಗೆ ಪ್ರಥಮಾಂಗನೆನಿಸಿದ ಬಿಂಬ ಪ್ರತಿಬಿಂಬ ಭಾವವಿವರಣೆ

## ೨೪೨

**(ನುಡಿ ೧):** ಖರವೈರಿ = ವಿಷ್ಣು

## ೧೭

ಅ.ಪ ದುಮ್ಮದ್ರಿನಿಲಯ = ಶಾಪುರ ತಾಲುಕಿನ ಗ್ರಾಮದ ಹೆಸರು, ಅಲ್ಲಿಯ ಪ್ರಾಣದೇವರು

## ೧೮

**(ನುಡಿ ೨):** ದ್ರುಪದನಂದಿನಿಯಳಿಗೆ ಪುಷ್ಪವ ತಂದಿತ್ತವನ=

ಸೌಗಂಧಿಕ ಪುಷ್ಪ ತಂದುಕೊಟ್ಟವ, ಭೀಮ

## ೧೯

ಪ ಅಷ್ಟಸಿದ್ಧಿಗಳನ್ನು ಥಟ್ಟನೆಗಳಿಸೋ (ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ ಧ್ಯಾನ, ಧಾರಣ ಸಮಾದಿ )

## ೧೯

**(ನು ೨):** ಇ ೨ ಮಾತುಲಾಂತಕ ನೊಲಿಸಿದ ದ್ರೌಪದಿಕಾಂತಾ

## ೨೨

ಕಾಳಗದಿ ಕಪಿ ವೀರರಿಗೆ ಕೃತವ್ಯಾಳ ಬಂಧವ ಬಿಡಿಸಿದಂಥ ವಾಲಖಿಲ್ಯರ ಪರವ ಪಡೆದ ವಿಶಾಲ ಮಹಿಮನೆ ಕಾಲಿಗೆರಗುವೆ ?

## ೨೪

ಧರಣಿಯೊಳು ಗೂಗಲ್ಲು ಕ್ಷೇತ್ರ ಸುಮಂದಿರನೆ ನಿನ್ನ ಕ್ಷೇತ್ರ ಮಹಿಮೆ

(ನುಡಿ ೩)–ಕ್ಷಿತಿಪವರ ಪರಿಕ್ಷಿತಗೆ–ಶುಕಮುನಿ–ಗೌತಮರು ತಪಮಾಡಿದ ಸ್ಥಳ

**(ನುಡಿ ೪):** ಶ್ವೇತಗಿರಿ ಸುಕ್ಷೇತ್ರ ಪಂಚಕ್ರೋಶಗನ, ನೀನೆ–ಸಿರಿ ವ್ಯಾಸಕುವರನೆ ?

## ೨೮

ಪದ್ಮನಾಭ ತೀರ್ಥರು

೧೯

ನರಹರಿ ತೀರ್ಥಯತಿವರ್ಯ

**(ನುಡಿ ೧):** ಗಜಪುರದಿ–ಪುರದರಸನಿಲ್ಲದಿರೆ

೨೦

ಪಾದಪದುಮವ ಭಜಿಸೋ ಮಾಧವ ತೀರ್ಥರ–ನಾಲ್ಕು ವೇದಗಳಿಗೆ ಭಾಷ್ಯರಚಿಸಿದವರು. ಮಣೂರಿನಲ್ಲಿ ಬೃಂದಾವನಸ್ಥರಾಗಿದ್ದಾರೆ. ಚನ್ನಕೇಶವ ದೇವನನ್ನು ಆರಾಧಿಸುತ್ತಿದ್ದರು.

೨೧

ಶ್ರೀಮದಕ್ಷೋಭ್ಯತೀರ್ಥರ ದಿವ್ಯಚರಿತ– ಯತಿಗಳು

ರುದ್ರಾಂಶರು, ವಿದ್ಯಾರಣ್ಯ ಯತಿಯನ್ನು ಜಯಿಸಿದವರು, ಕುದುರೆಯ ಮೇಲಿಂದಲೇ ನೀರು ಕುಡಿದ–ಧೋಂಡೋ ರಾಯರಿಗೆ ಜಯ ತೀರ್ಥರೆಂಬ ಆಶ್ರಮನಾಮವಿತ್ತವರು.

೨೨

ಕ್ಷಿತಿಯೊಳು ಮುದಮುನಿಕೃತಗ್ರಂಥಕೆ ವಿಶೃತ ಟೀಕಾಕೃತರು

೨೩

ಜೀತಾಮಿತ್ರಾಖ್ಯ ಮುನೀಂದ್ರನಮೋ–

ವಿಭುದೇಂದ್ರಯತಿವರರ ಶಿಷ್ಯರು ಗೋನದ ತರುವಿನಲ್ಲಿ ಅಂತರ್ಗತರು, ಸಪ್ತವಾಸರ ಜಲದಲ್ಲಿ ಧ್ಯಾನಮಗ್ನರಾದವರು.

೨೪

ಶ್ರೀಪಾದರಾಜ ಪಾಲಿಸೋ–ಧೃವಾಂಶರು, ವಿಜಯನಗರದ ದೊರೆ ಕೃಷ್ಣದೇವರಾಯ ನಿಂದ ಸನ್ಮಾನಿತರು–ವಿಪ್ರಹತ್ಯದೋಷ ಕಳೆದವರು, ಶಂಖೋದಕದಿಂದ ಕಪ್ಪು ಬಟ್ಟೆಯನ್ನು ಪ್ರಕಾಶಿಸುವಂತೆ ಮಾಡಿದವರು ಕೊಪ್ಪರ ಕ್ಷೇತ್ರದಲ್ಲಿ–ಶ್ರೀ ರಘುನಾಥ ವಿಭುದೇಂದ್ರರು ಪ್ರಶ್ನಿಸಿದಾಗ ಸಚ್ಛಾಸ್ತ್ರ ಸತ್ಯಾರ್ಥ ಪೇಳಿ ಶ್ರೀಪಾದರಾಜರೆನಿಸಿದರು. ಅರವತ್ತು ಬಗೆಯ ಮೃಷ್ಟಾನ್ನ ದೇವರಿಗೆ ಸಮರ್ಪಿಸುವವರು ಇವರನ್ನು ನೆನಸುವವರಿಗೆ ನಿತ್ಯವೂ ಮೃಷ್ಟಾನ್ನ ದೊರೆಯುವದೆಂಬ ಪ್ರತೀತಿ ಇದೆ.

೨೩

ವ್ಯಾಸಮುನೀಂದ್ರರ ವಾಡಿಕ್ಕೆ–ಗ್ರಂಥತ್ರಯ ರಚಿಸಿದವರು ಪ್ರಹ್ಲಾದವ್ಯಾಸ, ರಾಘವೇಂದ್ರರು ಬ್ರಾಹ್ಮಣ ತೀರ್ಥಕರ ಸಂಜಾತರು.

೨೭

ವಾದಿರಾಜ ಗುರುವೇ– ಸ್ವಾದಿಯಲ್ಲಿರುವವರು ವಾಗೀಶರತನಯಾ ಯುಕ್ತಿ ಮಲ್ಲಿಕಾ ರುಕ್ಮಣೀಶ ವಿಜಯ

ಹಯಗ್ರೀವ ದೇವರ ಆರಾಧಕರು ಭೂತ ಭಯವಬಿಡಿಸಿದವರು

೨೭

ನೆರೆನಂಬಿದವನೆ ಧನ್ಯಾ------ ಗುರು ವೇಧೇಶರ ಪಾದ ಭೀಮಾತೀರನದಿಯಲ್ಲಿರುವ ಮಣಿಪುರದಲ್ಲಿ ಶ್ರೀಮಂತಕುಟುಂಬದಲ್ಲಿ ಹುಟ್ಟಿದವರು ರಘೋತ್ತಮ ತೀರ್ಥರಲಿ ವೇದಾಂತವನ್ನು ಆಭ್ಯಾಸಿಸಿದವರು––ವೇದವ್ಯಾಸರಿಂದ ಸನ್ಯಾಸಾಶ್ರಮ ಪಡೆದವರು. ಯಾದವಾರ್ಯರಿಗೆ ಗುರುಗಳೆನಿಸಿ ಸಚ್ಛಾಸ್ತ್ರ ಬೋಧನೆಮಾಡಿದವರು ಅನೇಕ ಆಧ್ಯಾತ್ಮಿಕ ಗ್ರಂಥಗಳನ್ನು ಟೀಕಾಕಾರರ ಟೀಕೆಗಳಿಗೆ ಟಿಪ್ಪಣೆಗಳನ್ನು ಪದಾರ್ಥ ಯಾದಿಯನ್ನು ರಚಿಸಿದ್ದಾರೆ. ಕುನಿಮೂರ್ಹತಯಲ್ಲಿ ಶಿಷ್ಯರಿಗೆ ಬೋಧಿಸುತ್ತಿದ್ದಾಗ ಗಂಗೆಯನ್ನು ಸಾಕ್ಷತ್ಕರಿಸಿದವರು. ಕೃಷ್ಣದ್ವೈಪಾಯನ ತೀರ್ಥರನ್ನು ತಮ್ಮ ಶಿಷ್ಯರನ್ನಾಗಿ ಪಡೆದವರು.

೨೮

ಕೃಷ್ಣದ್ವೈಪಾಯನ ತೀರ್ಥರು: ಇವರ ಬೃಂದಾವನ ಕುಸುಮೂರ್ತಿಯಲ್ಲಿದೆ ಕುಸುಮೂರ್ತಿಯಲ್ಲಿರುವರು. ವೇದವ್ಯಾಸರಿಂದ ಸನ್ಯಾಸಾಶ್ರಮ, ವೇದೇಶ ತೀರ್ಥರಲ್ಲಿ ಅಧ್ಯಯನ, ಮಾಡಿದವರು ಸುರಪುರದಲ್ಲಿರುವ ಭಕ್ತರಾದಯಳೀಮೇಲಾರ್ಯರಿಗೆ ಅನುಗ್ರಹಿಸಿದವರು ಮಠದಲ್ಲಿ ಗಂಗೆಯನ್ನು ತದ್ಭವಿಸಿದವರು.

೨೯

ಗುರುರಾಘವೇಂದ್ರ ಕರುಣಿಸೋ: ಮಂತ್ರಾಲಯ ಕ್ಷೇತ್ರದಲ್ಲಿ ಸದೇಹ ಬೃಂದಾವನಸ್ಥರಾದವರು–ಸುಧೀಂದ್ರ ತೀರ್ಥ ಸನ್ಯಾಸ್ರಾಮ ಸ್ವೀಕರಿಸಿದವರು (ಕೋಲತನಯಾ – ಪ್ರಹ್ಲಾದ–ವ್ಯಾಸ–ರಾಘವೇಂದ್ರರು)

## ೪೩

ಲಿಂಗೇರಿ (ಗುಲ್ಬಾರ್ಗ ಜಿಲ್ಲೆಯ ಯಾವ ಶಿರಿಯಲ್ಲಿರುವ ರಾಘವೇಂದ್ರ ಗ್ರಾಮದಲ್ಲಿ ಭೀಮಾನದಿಯ ತಡಿ.

## ೪೨

ಭಕುತಿಪಾಲಿಸೊ–ಸತ್ಯಬೋಧ ಗುರುವರೇಣ್ಯ, ಸತ್ಯಪ್ರಿಯ ತೀರ್ಥರಿಂದ ಸನ್ಯಾಸಾಶ್ರಾಮ ಪಡೆದವರು, ಸವಣೂರಿನಲ್ಲಿ ಬೃಂದಾವನವಿದೆ. ರಾತ್ರಿಕಾಲದಲ್ಲಿ ಸೂರ್ಯದರ್ಶನಮಾಡಿಸಿದವರು. ಕೋನೇರಿಯಾದಾಚಾರ್ಯರು ವಾನರ ಜನ್ಮವನ್ನು ಹೊಂದಿದ್ದನ್ನು ಅರಿತು ಅವರಿಗೆ ತೀರ್ಥನೀಡಿದಾಗ ಅವರು ವಾನರಜನ್ಮದಿಂದ ಬಿಡುಗಡೆ ಪಡೆದರೆಂದು ಪ್ರತೀತಿ. ಸಾಕ್ಷಾತ್ ಗಂಗೆ ಇವರಿದ್ದಲ್ಲಿ ಹರಿದುಬಂದಳು.

## ೪೪

ವರದೇಂದ್ರ ತೀರ್ಥರಪದ ಧ್ಯಾನ–ವಸುಧೇಂದ್ರ ತೀರ್ಥರಿಂದ ಆಶ್ರಮ ಪಡೆದರು. ಕರ್ಣರಂತೆ–ದಾನಗೈವರೆಂಬ ಪ್ರಶಂಸೆಪಡೆದವರು ಮನೆಯಲಿ ಬೃಂದಾವನಸ್ಥರಾದವರು. ಶ್ರೀ ರಾಘವೇಂದ್ರರಿಂದ ೭ನೇ ಯತಿಗಳು. ಲಿಂಗಸಗೂರಿನಲ್ಲಿ ಇವರ ಅಭಿಮಾನಬೃಂದಾವನವಿದೆ ದಾಸಸಾಹಿತ್ಯವನ್ನು ಪಂಥವನ್ನು ಬೆಳೆಸಿದವರು.

## ೪೫

ವ್ಯಾಸತತ್ವಜ್ಞರ ಚರಿಯಾ–ಭುವನೇಂದ್ರ ತೀರ್ಥರಿಂದ ಸನ್ಯಾಸಾಶ್ರಮ ಸ್ವೀಕರಿಸಿದವರು. ಆದ್ವಾನಿಸಂಸ್ಥಾನದ ಹಿಚೆ ಗ್ರಾಮದ ವೆಂಕಟನರಸಿಂಹಾಚಾರ್ಯರ ಪುತ್ರರೆನಿಸಿದ ರಾಮರಾಯರು, ಗೋಪಾಲಕೃಷ್ಣನ ಆರಾಧಕರು. ಗದ್ವಾಲದ ದೊರೆಗೆ ಬಂದ ಭಯ ಪರಹರಿಸಿದವರು. ಶ್ಲೋಕಮಾತ್ರ (ಇವರು ನೀಡಿದ್ದು) ಪಠನದಿಂದ ಕೃಷ್ಣಾನದಿಯಲ್ಲಿ ಪ್ರವಾಹ ಬಂದು ನದಿದಂಡೆಗೆ ಬೀಡುಬಿಟ್ಟ ಯವನ ಸೈನಿಕರೆಲ್ಲ ಪಲಾಯನಗೈದರು. ಪಂಚಾಮೃತವನ್ನು ಗತ್ರಾವ ಸೇವಿಸಿ ಗೋಪಾಲ ಕೃಷ್ಣದೇವನ ಬಾಯಲ್ಲಿ ತರಿಸಿದವರು.

## ೪೬

ಸ್ಮರಿಸೋ ಸಂತತಮಾನವ ಗುರುವಿಷ್ಣು ತೀರ್ಥರಃ ಕೊಪ್ಪಳ ಜಿಲ್ಲೆಯ ಮಾದನೂರಿನಲ್ಲಿ ಬೃಂದಾವನಸ್ಥರಾದವರು. ಜಯತೀರ್ಥರ ಅನುಗ್ರಹದಿಂದ ಜನಿಸಿದರು. ರುದ್ರಾಂಶರು ಮಳಖೇಡದ ಚಾರಚಾರ್ಯರ ಪತ್ರರು. ವ್ಯಾಸತತ್ವಜ್ಞರಲ್ಲಿ ವೇದವೇದಾಂತರ ಆಧ್ಯಯನ– ಗುರುಮಿತ್ರರ ಮಹಜ್ವರ ನಿವಾರಣಗೆ ನರಹರಿಯ ಮಂತ್ರ ಜಪಿಸಿದವರು. ಗುರುಗಳ ಜೊತೆ

ಕುದುರೆಯನ್ನ ಸರಿಸಿ ಬರುತ್ತಿರುವಾಗ–ಬಿಸಿಲಿದ್ದುದರಿಂದ ಗುರುಗಳು ತಮ್ಮ ಪಾದುಕೆಗಳನ್ನು ಧರಿಸುವಂತೆ ಕೊಟ್ಟಾಗ ಅವುಗಳನ್ನು ತಮ್ಮ ತಲೆಯ ಮೇಲೆ ಹೊತ್ತು ಭಕ್ತಿ ಪೂರ್ವಕ ನಡೆದರು.

ಪತ್ನಿಯೊಡನೆ ಸರಸದಲ್ಲಿದ್ದಾಗ ಹರಿದಾಸರೊಬ್ಬರು 'ಮಂಚಬಾರದು ಮಡದಿಬಾರಳು ಮುಂಚೆ ಮಾಡಿರಿ ಧರ್ಮವ ' ಎಂಬುವ ಪದವನ್ನು ಕೇಳಿ ವಿರಕ್ತಿಯಿಂದ ಆಕ್ಷಣವೆ ಮನೆಯನ್ನು ತ್ಯಜಿಸಿದರು.

೪೭

ಸತ್ಯಧ್ಯಾನರ–ನಿತ್ಯಸ್ಮರಿಸಿ: ಉತ್ತರಾದಿಮಠದ ಸತ್ಯಜ್ಞಾನತೀರ್ಥರಿಂದ ಸನ್ಯಾಸಸ್ವೀಕಾರ. ಪಂಢರಪುರದಲ್ಲಿ ಬೃಂದಾವನಸ್ಥರಾದವರು.

೪೮

ಎಂತು ನಾ ಸ್ತುತಿಸಲಿ ಉತ್ತಾರಾದಿಮಠದ ರಘುದಾತಯತಿಗಳು –ಶ್ರೀರಘು ಕಾಂತರಿಂದ ಆಶ್ರಮ ಸ್ವೀಕಾರಮಾಡಿದರು. ಯಳಿಮೇಲಾರ‍್ಯರ ಒಲಿಮೆ ಪಡೆದವರು. ಆದಿ ಶಿಲೆಯ ಶೇಷ ದಾಸರನ್ನು ಸ್ತುತಿಸಿದವರು.

೪೯

ಸ್ಮರಿಸೊ ಮಾನವನೆ : ಶ್ರೀರಘು ವೀರತೀರ್ಥರು ಗುಲ್ಬರ್ಗ ಜಿಲ್ಲೆಯ ಸುರಪುರದಲ್ಲಿ ಜನನ, ವಿಠ್ಠಲಾರ್ಯರಲ್ಲಿ ಆಧ್ಯಯನ, ಕೂಡಲಿಯಲ್ಲಿ ಬೃಂದಾವನಸ್ಥರಾದರು.

೫೦

ಮಧ್ವಸಿದ್ಧಾಂತ ವೈಭವ ಸತ್ಯ ಪ್ರಮೋದತೀರ್ಥರು

೫೧

ರಾಮಧ್ಯಾನಸುತೀರ್ಥರು : ರಘು ವೀರತೀರ್ಥರಿಂದ ಆಶ್ರಮಸ್ವೀಕಾರ ಸುರಪುರದಲ್ಲಿ ಜನನ–ಯಳಮೇಲಾರ್ಯರ ಬಳಿ ಆಧ್ಯಯನ

೫೨

ಗುರುವರ್ಯ ಪುರಂದರ ಗುರುವರ್ಯ–ದಾಸರಿಂದ–ವ್ಯಾಸರಿಂದ ಉಪದೇಶ, ದಾಸದೀಕ್ಷೆ ಮಧ್ವತತ್ವ ದಾಸರ ಅನಪಲ್ಲಿಕರಣತ್ರಯಗಳಿಂದಾಚರಿಸುವ = ಕಾಯ, ವಾಚಾ, ಮನಸಾ

## ೫೨

ವಿಜಯರಾಯರ ಭಜಿಸೊ–ಭೃಗುಮುನಿ ರೂಪದಿ–ಕಾಶಿಯಲ್ಲಿ ಪುರಂದರ ದಾಸರಿಂದ ಅಂಕಿತ

## ೫೪

ಗೋಪಾಲದಾಸರಾಯ ಮಾಂಪಾಲಯ ಗಣೇಶಾಂಶರು ವಿಜಯದಾಸರ ಶಿಷ್ಯರು, ಜಗನ್ನಾಥದಾಸರಿಗೆ ಒದಗಿದ ವಿಪತ್ತನ್ನು ಧನ್ವಂತ್ರಿ ಶಾಪದಿಂದ ಕಳೆದವರು. ಆಯುರ್ದಾನನ್ನು ಮಾಡಿದವರು ಅನೇಕ ಸುಳಾದಿ ಕೀರ್ತನೆಗಳನ್ನು ರಚಿಸಿದವರು

## ೫೫

ಸೇರಿ ಸುಖಿಸುಮಾನವಾ–ಜಗನ್ನಾಥದಾಸರು ರಾಯಚೂರು ಜಿಲ್ಲೆಯ ಮಾನವಿ ತಾಲೂಕಿನಲ್ಲಿಯ ಬ್ಯಾಗವಾಡಿ ಗ್ರಾಮದಲ್ಲಿ ಜನಿಸಿದವರು ತಂದೆ ನರಸಿಂಹದಾಸರು.

## ೫೭

ಗುರುವಾರಪ್ಪಯ್ಯನ ಚರಣ–––ಕಾರ್ಪರ ಕ್ಷೇತ್ರದ ಅರ್ಚಕ ವಂಶದ ಮೂಲಪುರುಷ, ತಿರುಪತಿಯ ವೇಂಕಟರಮಣನನ್ನು ಕಾರ್ಪರಕ್ಷೇತ್ರಕ್ಕೆ ತಂದವರು

## ೫೮

ಸ್ಮರಿಸುವ ನರನೇಧನ್ಯ ' ಇಭರಾಮಪುರದ ಕೃಷ್ಣಾಚಾರ್ಯರು ಕಾರ್ಪರ ಕ್ಷೇತ್ರದ ಅರ್ಚಕ ವಂಶಸ್ಥರಿಗೆ ಸಂತಾನವನ್ನು ಕರುಣಿಸಿದ ಮಹಾನುಭಾವರು ಇವರು ಸ್ನಾನಗೈದ ನೀರು–ಪರಿಯುಳಯುಕ್ತ ಸುವಾಸನೆಯಿಂದ ಕೂಡಿರುತ್ತಿತ್ತು. ಮಂತ್ರಾಲಯ ರಾಘವೇಂದ್ರ ಪ್ರಭುಗಳ ಅಂತರಂಗ ಭಕ್ತರು ಮೈಸೂರು ದೊರೆಯಿಂದ ಸನ್ಮಾನಿತರಾದವರು ಮೈಸೂರು ಅರಮನೆಯಲ್ಲಿ ಪಂಚಮುಖದ ಪ್ರಾಣದೇವರ ಪ್ರತಿಮೆ ಪಡೆದಿದ್ದು ಇಂದಿಗೂ ನೋಡಬಹುದಾಗಿದೆ

## ೫೯

ತೆರಳಿಪೋದರು ವಿಠ್ಠಲಾರ್ಯರು–––––ಸುರಪುರದ ವಿಠಲಾರ್ಯರು ದೇವಾಂಶರು, ರಾಘವೇಂದ್ರ ಕರುಣಾಪಾತ್ರರು, ಅನೇಕ ಜನ ಶಿಷ್ಯರಿಗೆ ವೇದಾಂತಜ್ಞಾನವನ್ನು ನೀಡಿದರು.

## ಕೃತಿ ೬೦

ಗುರು ಕೂರ್ಮಾಚಾರ್ಯರ ಚರಣ-----ಗಾಲವ ಕ್ಷೇತ್ರದಲ್ಲಿ ನರಸಿಂಹಾಚಾರ್ಯರ ಉದರದಲ್ಲಿ ಜನಿಸಿದವರು. ನರಸಿಂಹಚಾರ್ಯರು ಕೊಲ್ಲಾಪುರಕ್ಕೆ ಹೋದಾಗ ಮಹಾಲಕ್ಷ್ಮಿಯ ಸುಂದರರೂಪದ ದರ್ಶನವನ್ನು ಪಡೆದವರು. ಅಲ್ಲದೆ ದೇವಿಯಿಂದ ಚರಣಕವಚವನ್ನು ಪಡೆದವರು. ಕೂರ್ಮಾಚಾರ್ಯರು ತಮ್ಮ ಸ್ವರ್ಣ ಸಂಪುಟದಲ್ಲಿಟ್ಟು ಪೂಜಿಸುತ್ತಿದ್ದರು. ದಿನಾಲು ೩೦೦ಕೊಡ ನೀರು ಸ್ನಾನಮಾಡುತ್ತಿದ್ದರು ಸತ್ಯಜ್ಞಾನತೀರ್ಥರಿಗೆ ಪ್ರೀತಿಪಾತ್ರರು,. ನಿತ್ಯವೂ ಭಗವದ್ಗೀತೆ ಹೇಳುತ್ತಿದ್ದರು.

## ಕೃತಿ ೬೧

ಸ್ಮರಿಸೊ ಆದರಿಸೊ------ ಐಕೂರು ನರಸಿಂಹಚಾರ್ಯರು ಕೃಷ್ಣಾನದಿ ತೀರದ ಐಕೂರು ಗ್ರಾಮದಲಿ ಜನಿಸಿದವರು ತಂದೆ ವೆಂಕಟಾಚಾರ್ಯ ತಾಯಿ ಸೀತಾದೇವಿ ಗೃಹಸ್ಥಾಶ್ರಮಿಗಳಾಗಿದ್ದೇ ಸಾಧನಗೈದು ವರ ಭಾಗವತರೆಂದು ಪ್ರಸಿದ್ಧಿ ಪಡೆದವರು. 'ಅನೇಕ ಹರಿದಾಸರಿಗೆ ಸ್ಫೂರ್ತಿಕೇಂದ್ರವಾದವರು ಶ್ಯಾಮಸುಂದರದಾಸರು ಗಿರಿಯಾಚಾರ್ಯರು.

**(ನುಡಿ ೩) ನಿರುತ ಮಾಡುವ ಕರ್ಮ: ನಾಹಂಕರ್ತಾ ಹರಿ:ಕರ್ತಾ** ಸಕಲಕೂ ಶ್ರೀಹರಿಯೆ ಪ್ರೇರಕ-ಮಧ್ವಸಿದ್ಧಾಂತದ ಪ್ರಮುಖತತ್ವ.

## ಕೃತಿ ೬೨

'ಸ್ಮರಿಸಿಸುಖಿಸು ಮನವೆ ---' ಗುರುರಾಜಚಾರ್ಯರು, ಸುರಪುರದ ಯಳಮೇಲಿ ವಿಠ್ಠಲಾಚಾರ್ಯ-ಕುಸುಮೂರ್ತಿ ಗುರುಗಳ ಒಲುಮೆ ಪಡೆದವರು.

**(ನುಡಿ ೩)** ಮನ್ಮರುತ ಶಾಸ್ತ್ರವ ಶ್ರವಣಗೈದರ-ದ್ವೈತಸಿದ್ಧಾಂತದನ್ವಯ

## ಕೃತಿ ೬೫

'ಚಿಂತಿಸುತಿರು ಮನವೇ ---' ಅನಂತಗಿರಿ ಕ್ಷೇತ್ರದ ಮಹಿಮೆ-ಮಾರ್ಕಂಡೆಯ ಋಷಿಗಳು ತಪಗೈದ ಸ್ಥಳ.

## ಕೃತಿ ೬೬

'ದೇವಾಬಾರಯ್ಯಾ----' ಮಣೂರು ಕ್ಷೇತ್ರದ ಚನ್ನಕೇಶವ ದೇವರು ಧ್ರುವನಿಂದ ಪೂಜಿತರು. ಶ್ರೀ ವಿದ್ಯಾನಿಧಿತೀರ್ಥರು-ಸಂಸ್ಥಾಪಿಸಿದ್ದಾರೆ. ಸತ್ಯಪ್ರಮೋದ ತೀರ್ಥರು ಪೂಜಿಸಿದ್ದಾರೆ. ಇಲ್ಲಿ ವರದಾಚಾರ್ಯರೆಂಬ ಪಂಡಿತರೂ ಆಗಿದ್ದಾರೆ.

## ೨೮೬ ೭೯

'ಬಾಗಿನಮಿಪೆ---' ಕೃಷ್ಣಾತೀರದಲ್ಲಿ ಅಶ್ವತ್ಥವೃಕ್ಷಾಂತರ್ಗತ ಸ್ವಯಂವ್ಯಕ್ತ ಶ್ರೀ ಲಕ್ಷ್ಮೀನೃಸಿಂಹ ಸಾಲಿಗ್ರಾಮದೇವರ ಸ್ತುತಿ ಕಾರ್ಪರ ಋಷಿಗಳು ತಪಗೈದ ಸ್ಥಳ.

## ೨೮೮ ೭೦

'ಬಾರೊ ವೆಂಕಟರಮಣ------' ಆಂದ್ರ ಸೀಮೆಯ ಗುಡೇಬಲ್ಲೂರಿನ ವೆಂಕಟರಮಣ ದೇವರಸ್ತುತಿ. ಮಾಂಡವ್ಯ ಋಷಿಗಳು ಈ ಸ್ಥಳದಲ್ಲಿ ತಪಗೈದು ದೇವರನ್ನು ಪ್ರತ್ಯಕ್ಷೀಕರಿಸಿಕೊಂಡು ಇಲ್ಲಿ ಗೊಲ್ಲರಿಂದ ಅರ್ಚನಾದಿ ಸೇವೆ ಪಡೆದನು. ಕಳ್ಳರು ದೇವರ ಆಬರಣಗಳನ್ನು ಕದ್ದಾಗ ಅವರ; ಕಣ್ಣು ಕಾಣದಂತಾಗಿ ಪ್ರಾರ್ಥಿಸಲು ಕಣ್ಣು ಕಾಣಿಸಿದವೆಂದು, ಅವರು ಬಂಗಾರದ ನಾಮಗಳನ್ನು ದೇವರಿಗೆ ಮಾಡಿಸಿದರೆಂದು ತಿಳಿದು ಬರುತ್ತದೆ.

## ೨೮೯ ೭೧

'ಭಜರೆಮಾನಸ______' ಗಜೇಂದ್ರಮೋಕ್ಷ, ಅರ್ಜುನನಿಂದ ಸ್ತುತಿಗೊಳ್ಳುವ ಬಲಿಯನ್ನು ಅನುಗ್ರಹಿಸಿದವ.

## ೨೯೦ ೭೨

'ರಂಗನಾಥಮಾಂ----' ರಾಯಚೂರು ಜಿಲ್ಲೆಯ ದೇವದುರ್ಗ ಜಾಲಹಳ್ಳಿ ಗ್ರಾಮದ ರಂಗನಾಥ ದೇವರ ಮಹಿಮೆ. ಪೌರಾಣಿಕ ವಿಷಯ ಮುದಗಲ್ಲಿನಿಂದ ಬರುವ ಉಪ್ಪಾರನ ಗೋಣೀಚೀಲದೊಳಗೆ ಬಂದ ದೇವರು, ಜಾಲಹಳ್ಳಿ ಗೌಡರಿಗೆ ಸ್ವಪ್ನದಲ್ಲಿ ತನ್ನ ಮಂದಿರವನ್ನು ನಿರ್ಮಿಸಲು ಸ್ವಪ್ನ ಸೂಚನೆ ನೀಡಿದನೆಂದು ಪ್ರತೀತಿ.

**(ನುಡಿ ೩): ಶ್ರೀಹರಿಯ ದಶಾವತಾರ ಸ್ತುತಿ ಇದೆ**

| | |
|---|---|
| ವಾರಿಚರ | = ಮಚ್ಛ |
| ಮಂದರಧರ | = ಕೂರ್ಮ |
| ಭೂಚೋರಮಥನ | = ವರಾಹ |
| ಘೋರರೂಪ | = ನಾರಸಿಂಹ |
| ಚಾರುಬ್ರಹ್ಮಚಾರಿ | = ವಾಮನ |
| ಶೂರಪರಶುರಾಮ | = ಪರಶುರಾಮ |

| | |
|---|---|
| ಧಾರುಣಿಜಾವಲ್ಲಭ | = ಶ್ರೀರಾಮ, ಜಾನಕೀಪತಿ ಶ್ರೀರಾಮ |
| ಕಂಸಾರಿ | = ಕೃಷ್ಣ |
| ವಸನದೂರನೆ | = ಬೌದ್ಧ |
| ಹಯವೇರಿದ | = ಕಲ್ಕಿ |

~~೨೦೫~~ 2೫

'ಶ್ವೇತಗಿರಿನಿವಾಸ---' ಶ್ವೇತಶೃಂಗಿಯ ಕೇಶವ ದೇವರು

ಶ್ರೀರಾಮ, ಸೀತಾ, ಲಕ್ಷ್ಮಣರು ಸಂಚರಿಸಿದ ಸ್ಥಳ, ಇಲ್ಲಿ ಸಪ್ತಋಷಿಗಳು, ಅಷ್ಟತೀರ್ಥರು ಶ್ವೇತರಾಜ ತಪಗೈದ ಸ್ಥಳ ವಾದುದರಿಂದ ಶ್ವೇತಶೃಂಗಿಯೆಂದು ಕರೆಯಿಸಿತು ಸ್ಕಂದ ಪುರಾಣನದಲ್ಲಿ ಈ ವಿಷಯ ಉಲ್ಲೇಖಿತವಾಗಿದೆ. ಶೃಂಗನೆಂಬ ಋಷಿಯು ತಪಗೈದ ಸ್ಥಳ ಇಲ್ಲಿ ಸ್ನಾನಗೈದರೆ ಕಾಶಿಯಾತ್ರೆಯ ಫಲವೆಂಬ ಪ್ರತೀತಿ.

~~೨೦೪~~ 2 ೬

ಅನಂತಗಿರಿ ವರ್ಣನೆ: ನಿತ್ಯಅಹೋಬಲ ನರಸಿಂಹನ ದರ್ಶನ ಪಡೆಯುತ್ತಿದ್ದ ಪಾರಿಜಾತವೃಕ್ಷದಿಂದ ನರಸಿಂಹದೇವರು ಪ್ರತ್ಯಕ್ಷನಾದ ಆಷಾಢಮಾಸದ ಸಾಧನ ದ್ವಾದಶಿಯಂದು. ವಾರನೇಮೀರದಂತೆ ನರಸಿಂಹನೆ ಈಕ್ಷೇತ್ರಕೆ ಆಗಮಿಸಿದ ವಿಷಯ ಪ್ರಾತಿಪಾದನೆ ಈ ಕೀರ್ತನೆಯಲ್ಲಿದೆ.

~~೨೦೫~~ 22

'ಸಾರಿದೆನೊ ನಿನ್ನ ---' ಕಾರ್ಪರ ಕ್ಷೇತ್ರದ ನಾರಪ್ಪಯ್ಯನೆನ್ನುವ ಭಕ್ತರ ಭಕ್ತಿಗೆ ಒಲಿದ ತಿರುಪತಿ ವೇಂಕಟರಮಣ ಗೋರೂಪದಿಂದ ಕಾರ್ಪರಕ್ಷೇತ್ರಕ್ಕೆ ಬರುವುದಾಗಿ ಅಭಯವಿತ್ತು, ಆದರೆ ತಲಪುವವರೆಗೊ ತನ್ನನ್ನು ತಿರುಗಿ ನೋಡಬಾರದೆಂದು ಹೇಳಿದ ಕಾರ್ಪರ ಗ್ರಾಮ ಸಮೀಪದ 'ಕುರಕಿಹಳ್ಳಿ' ಎಂಬ ಗ್ರಾಮದಲ್ಲಿ ದರ್ಶನದ ಹಂಬಲ ತಡೆಯದೆ ನಾರಪ್ಪಯ್ಯನು ತಿರುಗಿ ನೋಡಿದಾಗ ದೊಡ್ಡ ಬಿಳಿಯ ಬಣ್ಣದ ಸುಂದರವಾದ ಅಲಂಕೃತವಾದ ಆಕಳು ಅಲ್ಲಿಯೆ ಇದ್ದ ದೊಡ್ಡ ಕಲ್ಲುಗುಂಡಿನ ಮೇಲೆ ಹಾಲು ಕರೆಯಿತು. ಮರುದಿನ ಆಕಲ್ಲು ಗುಂಡಿನ ಮೇಲೆ ವೆಂಕಟರಮಣ ಸ್ವಯಂಭೂ ಒಡಮೂಡಿದ್ದು ಇಂದಿಗೂ ನೋಡ ಬಹುದಾಗಿದೆ.

## ೨೦೯ ಅ೧

'ರಾಮನ ನೋಡಿರೈ ----' ಉತ್ತರಾದಿಮಠದ ರಘುಶಾಂತತೀರ್ಥರು ರಾಮನನ್ನು ಪೂಜಿಸುತ್ತಿದ್ದ ವೈಭವದ ವರ್ಣನೆ. ಶ್ರೀರಾಮರ ಮೇಲೆ ಅಪಾರಭಕ್ತಿಯುಳ್ಳ ರಘುಶಾಂತ ತೀರ್ಥರು ಬಾಲಕರ ರೂಪದಲ್ಲಿ ರಾಮ-ಲಕ್ಷಣ ದರ್ಶನ ಪಡೆದರು. ಕೂಡಲಿಯಲ್ಲಿ ಗುಡಿಯಲ್ಲಿ ಪಾರಾಯಣ ಮಾಡುವಾಗ ಗೆಜ್ಜೆಗಳನಾದವನು ಇಬ್ಬರು ಬಾಲಕರು ಬರುವುದನ್ನೂ ಕಂಡವರು.

## ೨೦೦ ಅ೨

' ವೇದವ್ಯಾಸರ ದಿವ್ಯಪಾದ ' ವೇದವಿಭಾಗ ಗೈದವ್ಯಾಸರು ಬದರಿಯಲ್ಲಿ ಮಧ್ವಚಾರ್ಯರಿಗೆ ಭಾಷ್ಯರಚಿಸುವಂತೆ ಆದೇಶವಿತ್ತರು ಬ್ರಹ್ಮ ಸೂತ್ರಗಳನ್ನು ರಚಿಸಿದರು.

## ೨೦೧ ಅ೩

ನುಡಿ ೧ ಮೂರು ತಾಪಗಳನೋಡಿಸಿ-ಆದಿಭೌತಿಕ, ಆಧಿದೈವಿಕ, ಆಧ್ಯಾತ್ಮಕ ಮೂರು ಸಾಧನವ ನೀಡುತಲಿ-ಶ್ರವಣ, ಮನನ, ನಿಧಿದ್ಯಾಸನ ಬಿಂಬಮೂರುತಿಯನು ಮನದಿ ಕಾಂಬುವಂದದಲಿ-ಬಿಂಬದರ್ಶನ-ಆತ್ಮಾಪರೋಕ್ಷ.

**(ನುಡಿ ೨)**: ಕರಿವರದ ಗುಣಗಳನೆ ಕೊಂಡಾಡೋ-ಗಜೇಂದ್ರಮೋಕ್ಷದ ಘಟನೆ

**(ನುಡಿ ೩)**: ಪಂಚ ಬಾಣನಗೆಲಿದಧೀರಾ-ಐದು ಪುಷ್ಪಬಾಣಗಳು

ಮನ್ಮಥನ ದಹನ=ಮನ್ಮಥ

ದ್ವಿಪಂಚಕರಣಗಳಿಂದ ಮಾಡಿಸು ಸದ್ವ್ಯಾಪಾರ-ಐದು ಜ್ಞಾನೇಂದ್ರಿಯಗಳ ಐದು ಕರ್ಮೇಂದ್ರಿಯಗಳು

## ೨೦೧ ಅ೪

'ಸೇವಿಸುಮನುಜಾನಿರಂತರ------' ಭಾಗವತದ ಸಾರವನ್ನು ಇಲ್ಲಿ ಹೇಳಲಾಗಿದೆ ಮನಸ್ಸಿನ ಪಾವಿತ್ರ್ಯತೆಗೆ ಮನುಶ್ಯರಿಗೆ ಶ್ರದ್ಧಾಪೂರ್ವಕ ಶ್ರವಣದ ಸಾಧನದಿಂದ-ಭಕ್ತಿ,ಜ್ಞಾನ ಇದರಿಂದ ಅನಿರುದ್ಧನ ಪ್ರಾಪ್ತಿ. ನಾನಾ ವ್ಯಸನಗಳಿಗೆ ವಸುದೇವಸುತ ಸಂಕೀರ್ತನ, ಸ್ಮರಣೆ, ಜ್ಞಾನ ವೈರಾಗ್ಯ.

ಕೀ ನುಡಿ ರ ಅಪರೋಕ್ಷ-ನುಡಿ ೧೦-

**(ನುಡಿ ೧೨)**: ಜೀವರ ಬಂಧ ವಿಮೋಚನ

೩೧೩

' ನೋಡಬನ್ನಿರಿ -----' ಕಾರ್ಪರಕ್ಷೇತ್ರದ ಮಹಿಮೆ

೩೧೪

'ಕ್ಷೋಣಿಯೊಳು-----'ವರಮಹಾಲಕ್ಷ್ಮಿಯ ವ್ರತ ಪಾರ್ವತಿ, ಲೋಕಹಿತಕ್ಕಾಗಿ ಶಿವನನ್ನು ಪ್ರಶ್ನಿಸಿದಾಗ–ಲೋಕಮಾತೆಯ ವ್ರತ ಶಿವನು ಹೇಳಿದ್ದು ಸೂತರು ಶೌನಕಾದಿ ಮುನಿಗಳಿಗೆ ಪೇಳಿದ್ದು..

**(ನುಡಿ ೧೦)**:-----ಚನ್ನಾಗಿ ಬಿಡಿಸಿ ತತ್ತನ್ನಿಯಾಮಕರ ಚಿಂತಿಪುದು–ಆಯಾಪದಾರ್ಥಗಳ–ತತ್ವಾಭಿಮಾನಿ ದೇವತೆಗಳ ಚಿಂತಸಿ ದೈತ ಸಿದ್ಧಾಂತಗಳಲ್ಲಿ ಪ್ರತಿಯೊಂದು ಪ್ರದಾರ್ಥಕ್ಕೂ ತತ್ವಾಭಿಮಾನಿ ದೇವತೆಗಳನ್ನು ಆರಾಧಿಸಲಾಗುತ್ತದೆ.

೩೧೫

'ಏಳು ಶ್ರೀನರಹರಿಯೆ----' ಉದಯರಾಗ

೩೧೬

ಜಯ ಮಂಗಳೆಂದು ಪಾಡಿರೆ

೩೨೦

'ಆರುತಿ ಮಾಡುವೆನಾ----' ಸಂಪ್ರದಾಯದಲ್ಲಿ ಕಂಡು ಬರುತ್ತದೆ. ದೇವರು ಲಕ್ಷ್ಮೀದೇವಿ–ಪಾರ್ವತಿ, ದಾಸರಿಗೆ, ರಾಘವೇಂದ್ರರಿಗೆ, ಪ್ರಾಣದೇವರಿಗೆ.

೩೨೯

ವೃಂದಾವನಿ ದೇವಿ------ಧನ್ವಂತ್ರಿದೇವನ ಅನಂಧ ಬಾಷ್ಪೋಧಕ

೩೩೬

ಹಾಸಿಗೆಗೆ ಕರೆಯುವ ಹಾಡು–ದೇವರನ್ನು

೩೩೭

ಲಕ್ಷ್ಮಿಯನ್ನು ಹಾಸಿಗೆಗೆ ಕರಿಯುವ ಹಾಡು

೧೧೦

ಹಾರಹಾಕುವ ಉರುಟನಿ ಸಂಪ್ರದಾಯ

೧೧೧

ತಾಂಬೂಲ ಕೊಡುವ ಹಾಡು

೧೧೬

'ಮಂಗಲ ಮಾನವಿನಿಲಯ-----'ಭೇದಪಂಚಕ ಸುಬೋದ-

ಪಂಚ ಭೇದಗಳ ವಿವರಣೆ:-ಮಧ್ವಸಿದ್ಧಾಂತಗಳ ಪ್ರಮುಖ ತತ್ವವಿದು

೧. ಜೀವ-ಈಶ, ೨)ಜೀವ-ಜೀವ ೩)ಜೀವ-ಜಡ ೪.ಈಶ-ಜಡ ೫.ಜಡ-ಜಡ

೧೧೭

ಬಾಳೋಸುಖದಿ ಬಾಲನೆ - ಆಶೀರ್ವಾದಾದಹಾಡು

೧೧೮

ಘನಸುಖಂಪಡಿ

**(ನುಡಿ ೪):** ರತಿಪತಿಪಿತನಿಗೆ ಅತಿಥಿಗಾರನು ಸಂತತ ಸತ್ಕರಿಸುತ ಪ್ರತಿಮೆಗಳೆನ್ನುತ ಜೀತನರೆಲ್ಲರೂ ದೇವನ ಪ್ರತಿಮೆಗಳೆಂಬ ತತ್ತ್ವ ಇಲ್ಲಿದೆ.

# ಅನುಬಂಧ–೪

## ಕೀರ್ತನೆಗಳ ಅಕಾರಾದಿ ಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೯. | ಪತಿತಪಾವನ ಗೋವಿಂದ | ೨ |
| ೨೦. | ಪವಮಾನ ಪವಮಾನ ತವನವಪದ | ೪ |
| ೨೧. | ಪಾಲಿಸೆನ್ನ ಕಾಪಾಲಿಯೆ ನೀನು | ೬ |
| ೨೨. | ಬಾಯಂದು ಕರೆವೆನೊ ದೇವನಿನ್ನ | ೨೩ |
| ೨೩. | ಬಿಡುಮನ ಭವಾಖ್ಯ ಉರಗದ ಸಂಗ | ೨೪ |
| ೨೪. | ಭಕುತರಿಗಾಗಿ ನೀ ಬಡುವ ಕಷ್ಟಗಳು | ೨೫ |
| ೨೫. | ಮಿಗೆಧನ್ಯ ನಾನಾದೆ ಜಗದವಳಗೆ | ೧೩ |
| ೨೬. | ಮುದದಿ ಪಾಲಿಸೊ ಮುದತೀರಥರಾಯಾ | ೫ |
| ೨೭. | ಮೋದ ಭರಿತ ಕೇಶವನೆ ಈಜಗಕಾದಿಕರ್ತನೆಂಬೋದು ಖರೆ | ೨೮ |
| ೨೮. | ಶ್ರೀ ಗುರು ಪದಕೆ ಬಿಡದೆ ರಾಗದಿ ನಮಿಪೆ | ೧೪ |

## ಶ್ರೀ ಕಾರ್ಪರ ನರಹರಿದಾಸರು

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧. | ಆರುತಿ ಮಾಡುವೆನಾ ಕೃಷ್ಣ ಮೂರುತಿಗೆ | ೯೨ |
| ೨. | ಆರುತೀಯತಾರೆ ಶ್ರೀಹರಿಗೆ ಸುರಸಾರ್ವಭೌಮಗೆ | ೯೩ |
| ೩. | ಇಂದು ಆರುತಿ ತಂದು ಬೆಳಗಿರೆ ಇಂದಿರಾವರಗೆ | ೯೪ |
| ೪. | ಇಂದು ಆರುತಿ ತಂದು ಬೆಳಗಿರೆ ಸಿಂಧುರಾಜನಕುವರಿಗೆ | ೯೮ |
| ೫. | ಇಂದು ಆರುತಿ ತಂದು ಬೆಳಗಿರೆ ಚಂದ್ರ ಮೌಳಿಯ ರಾಣಿಗೆ | ೧೦೩ |
| ೬. | ಎಂತು ನಾ ತುತಿಸಲಿ ಯತಿವರ ಚರ್ಯ ನಾಮುಗಿವೆನುಕಯ್ಯಾ | ೪೮ |
| ೭. | ಏನು ಸಾಧನ ಮಾಡಿ ಕೃಷ್ಣನ ಕರವಸೇರಿತೋ ಸುಖ | ೬೩ |
| ೮. | ಏಳು ಶ್ರೀನರಹರಿಯೆ ಏಳು ತ್ರಿದಶರ ಧೊರಿಯೆ | ೮೭ |
| ೯. | ಕರುಣಾದಿ ಪೊರೆಯನ್ನ ಪಾರ್ವತಿರಮಣ | ೨೪ |
| ೧೦. | ಕರುಣಿಸು ನರಹರಿಯೆ ಸ್ಮರಣೆಯ | ೬೪ |
| ೧೧. | ಕೃಷ್ಣದ್ವೈ ಪಾಯನ ಗುರುರಾಜರ ಚರಣ ಕಮಲಕಾನಮಿಪೆ | ೩೮ |
| ೧೨. | ಕಾಯೆ ಕಮಲಾಲಯೆ | ೩ |
| ೧೩. | ಕುಂದಣದಾರುತಿ ತಂದು ಬೆಳಗಿರೆ | ೯೫ |
| ೧೪. | ಕೊಡುವೆ ತಾಂಬೂಲವ ಪಿಡಿಯೊ ಪಿಡಿಯೊ ದೇವಾ | ೧೧೧ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೧. | ನಾರಸಿಂಹ ಪರಿಪಾಲಯಮಾಂ ಸತತಂಭವ | ೬೭ |
| ೪೨. | ನೆರೆನಂಬಿದವನೆ ಧನ್ಯಾ ಈ ಗುರುಪದ | ೩೭ |
| ೪೩. | ನೋಡ ಬನ್ನಿರಿ ಕಾರ್ಪರೇಶನ ಪಾಡಿರೈಸರ್ವೇಶನಾ | ೮೫ |
| ೪೪. | ನೋಡು ಕರುಣದಿಂದ ಸರಸ್ವತಿ ನೀಡೆನಗೆ ಸುಮತಿ | ೨೦ |
| ೪೫. | ಪದ್ಮನಾಭರ ಭಜಿಸೊ ಹೇಮನುಜಾನೀ | ೨೮ |
| ೪೬. | ಪಾದ ಪದುಮವ ಭಜಿಸೋ ಮಾಧವ ತೀರ್ಥರ | ೩೦ |
| ೪೭. | ಪಾಲಿಸೆನ್ನನು ಶ್ರೀ ಲಕುಮಿವರ ಭೂಲೋಲ ಕಾರ್ಪರ | ೬೮ |
| ೪೮. | ಪಾವಮಾನಿಯೆ ಪಾಲಿಸೊ ಕರಪಿಡಿದುದ್ಧರಿಸೊ | ೭ |
| ೪೯. | ಪಾಹಿ ವಿನತಾತ್ಮಜ ಪತಗಾಧಿರಾಜ | ೨೨ |
| ೫೦. | ಪಾಹಿ ಶ್ರೀ ಗುರುರಾಘವೇಂದ್ರ ಅಮಿತಗುಣಸಾಂದ್ರ | ೪೦ |
| ೫೧. | ಬಂದರಾ ರಾಘವೇಂದ್ರರಾಯರು ಮಂತ್ರ | ೪೧ |
| ೫೨. | ಬಾಗೀ ನಮಿಪೆ ಬೇಗಬಾರೊ ಶ್ರೀನರಹರಿಯೆ | ೬೯ |
| ೫೩. | ಬಾರೆ ಗೌರಿ ಪೂಜಿಸುವೆನು ಸಾರಸಾಂಬಕಿ | ೨೬ |
| ೫೪. | ಬಾರೋ ಗುರುರಾಘವೇಂದ್ರ ಸದ್ಗುಣಸಾಂದ್ರ | ೪೨ |
| ೫೫. | ಬಾರೋ ಶ್ರೀ ವೆಂಟಕರಮಣ | ೭೦ |
| ೫೬. | ಬಾರೋ ಬೇಗನೆ ಶ್ರೀಧರ ಗುಣಾಕರ | ೧೦೮ |
| ೫೭. | ಬಾಳು ಸುಖದಿ ಬಾಲನೆ | ೧೧೭ |
| ೫೮. | ಬೆಳಗಿರೆ ಆರುತಿ ಲಲನೆಯರೆಲ್ಲರು | ೯೬ |
| ೫೯. | ಬೆಳಗಿರೆ ಆರುತಿ ಶ್ರೀ ತುಳಸಿಗೆ | ೧೦೨ |
| ೬೦. | ಭಕ್ತ ಪ್ರಹ್ಲಾದಗೆ ಆರುತಿ ಮಾಡುವೆನಾ | ೧೦೫ |
| ೬೧. | ಭಕುತಿ ಪಾಲಿಸೊ ವಿರಕ್ತಿ ಕರುಣಿಸೊ | ೪೩ |
| ೬೨. | ಭಜರೆ ಮಾನಸ ದ್ವಿಜವರ ಗಮನಂ | ೭೧ |
| ೬೩. | ಭಾರತೀ ರಮಣ ಸುರವಿನುತ ಚರಣ | ೮ |
| ೬೪. | ಭಾರತೀವರ ಪಾಹಿಮಾಂ ಟೊಣ್ಣೂರು ಮಂದಿರ ಕರುಣಾಕರ | ೯ |
| ೬೫. | ಭಾರತೀಶ ಪಾಹಿಸುರವರ ನಾ ಮುಗಿವೆನು ಕರ | ೧೦ |
| ೬೬. | ಭಾರತೀಶನೆ ಬೇಗ ಬಾರೊ ಮನ್ಮನದಲಿ | ೧೧ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು